ಮುಖಚಿತ್ರ : **ಬಿ. ಎಂ. ಶ್ರೀಯವರು**

# ಪುಸ್ತಕ ಪ್ರಪಂಚ

## ‘ಶ್ರೀ’ ಸಂಚಿಕೆ

ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಪ್ರಕಟಣೆ

ಂಪುಟ ೧೮ ಜನವರಿ ೧೯೫೪ ಸಂಚಿಕೆ ೭

## ಗುರು ಕಾಣಿಕೆ

ಗುರುವರ್ಯ ಬಿ. ಎಂ. ಶ್ರೀಕಂಠಯ್ಯನವರಿಗೂ ನನಗೂ ಇದ್ದ ಬಾಂಧವ್ಯ ಲ್ಪಮಟ್ಟಿಗೆ ವಿಚಿತ್ರ ರೂಪವಾದದ್ದು. ಭಾರತೀಯರಲ್ಲಿ ಸಾಮಾನ್ಯವಾಗಿ ರು-ಶಿಷ್ಯ ಸಂಬಂಧವನ್ನು ಕುರಿತು ರೂಢಮೂಲವಾಗಿರುವ ಅಭಿಪ್ರಾಯ ದು: ಗುರುವೆಂದರೆ ವಿಶೇಷ ಘನತೆಯ ಬಲು ಎತ್ತರದ ಮಹಾನ್ ವ್ಯಕ್ತಿ. ಷ್ಯನೆಂದರೆ ಅತಿನಮ್ರನಾದ ಹೆಜ್ಜೆಯನ್ನು ಅನುಸರಿಸುವ ಚಿಕ್ಕವನು. ವನ ವಚನ ಇವನಿಗೆ ವೇದವಾಕ್ಕಿನಂತೆ ಅನುಲ್ಲಂಘನೀಯ, ಅಮೋಘ, ಪರಿಹಾರ್ಯ. ಆ ಬಗೆಯ ಸಂಬಂಧ ಆಧುನಿಕ ಯುಗದಲ್ಲಿ ಅಷ್ಟೊಂದು ಚ್ಛಾಗಿ ನಿದರ್ಶಿಸಲ್ಪಟ್ಟಿಲ್ಲ; ನಿದರ್ಶಿತವಾಗಲು ತಕ್ಕ ವಾತಾವರಣವೂ ಇಲ್ಲ. ರುವೂ ಮನುಷ್ಯನೇ; ಮನುಷ್ಯ ಸಹಜವಾದ ಕೊರೆ ನ್ಯೂನತೆಗಳು ಅವನಲ್ಲಿ ಷ್ಟವಾಗಿಯೊ ಅಸ್ಪಷ್ಟವಾಗಿಯೊ ಕಂಡೇಬರುತ್ತವೆ. ಆದರೆ ಶಿಷ್ಯನಾದವನು ವನ್ನು ನಿರ್ಲಕ್ಷಿಸಿ, ಗುರುವಿನ ಹೆಗ್ಗುಣಗಳನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಅವು ಳಿಗೆ ಗೌರವವನ್ನಿತ್ತು, ತನ್ನ ಬಾಳಿನಲ್ಲಿ ಅವು ಆದರ್ಶವಾಗಿರುವಂತೆ ನಿಯೋಜಿಸಿ ಾಂಡು ಜೀವನಸಾರ್ಥಕ್ಯ ಗಳಿಸಿಕೊಳ್ಳತಕ್ಕದ್ದು. ಬಿ. ಎಂ. ಶ್ರೀಕಂಠಯ್ಯ ವರು “ಎಲ್ಲವನ್ನೂ ಎಲ್ಲರನ್ನೂ ಪರೀಕ್ಷಿಸಿ, ಎಲ್ಲವನ್ನೂ ತೂಗಿನೋಡಿ, ಲ್ಲರನ್ನೂ ಪ್ರಶ್ನೆ ಕೇಳಿ,—” ಎಂದು ಮತ್ತೆ ಮತ್ತೆ ಘೋಷಿಸುತ್ತಿದ್ದರು. ವರು ನನಗೆ ಇಂಗ್ಲಿಷ್ ಎಂ ಎ. ತರಗತಿಯಲ್ಲಿ ಪಾಠ ಹೇಳಿದ ಪ್ರಾಧ್ಯಾಪಕರು, ಾನು ಅವರಿಗೆ ಸಹಾಯಕ ಪ್ರಾಧ್ಯಾಪಕ. ಕಾಲೇಜಿನ “ಇಂಗ್ಲಿಷ್ ಸೆಮಿನಾರ್” ಂಬ ವ್ಯಾಸಂಗ ಗೋಷ್ಠಿಗೆ ಅವರು ಸ್ಥಾಪಕ ಅಧ್ಯಕ್ಷರು, ನಾನು ಕಾರ್ಯದರ್ಶಿ; ನ್ನಡ ಸಾಹಿತ್ಯ ಪರಿಷತ್ತಿಗೆ ಅವರು ಉಪಾಧ್ಯಕ್ಷರು (ಆಗ ಪರಿಷತ್ತಿಗೆ

ದಿವಂಗತ ಯುವರಾಜ ನರಸಿಂಹರಾಜ ಒಡೆಯರ್ ಅವರೇ ಅಧ್ಯಕ್ಷರಾಗಿದ್ದರು). ನಾನು ಕಾರ್ಯದರ್ಶಿ. ಇನ್ನೂ ಕೆಲವು ಸಂಸ್ಥೆಗಳಲ್ಲೂ ಹೀಗೆಯೇ. ಅಲ್ಲದೆ ನಾವಿಬ್ಬರೂ ಒಂದೇ ಚಬ್ಬೂರು ಕಮ್ಮೆ ಪಂಗಡಕ್ಕೆ ಸೇರಿದವರು. ಇಷ್ಟೊಂದು ನಿಕಟ ಬಾಂಧವ್ಯ ನಮ್ಮಿಬ್ಬರನ್ನೂ ಕೂಡಿಸಿತ್ತು. ವಾಸ್ತವ್ಯ ಹೀಗಿದ್ದರೂ ನಾನು ನನ್ನ ಸ್ವಂತ ವ್ಯಕ್ತಿತ್ವ ಜವಾಬ್ದಾರಿ ಕರ್ತವ್ಯಗಳನ್ನು ಬಿಟ್ಟುಕೊಡುವುದಕ್ಕೆ ಎಂದೂ ಒಪ್ಪುತ್ತಿರಲಿಲ್ಲ. ಹಲವು ಪ್ರಸಂಗಗಳಲ್ಲಿ ಅವರ ಇಚ್ಛೆಗೆ ವಿರುದ್ಧವಾಗಿ ವರ್ತಿಸಿ ಅವರಿಗೆ ಮನಃಕ್ಲೇಶವನ್ನು ಉಂಟುಮಾಡಿದ್ದೂ ಸತ್ಯಾಂಶ. ಇದೊಂದು ಉದಾಹರಣೆಯನ್ನು ಗಮನಿಸಿ. ೧೯೩೭ರಲ್ಲಿ ಮೈಸೂರಿನ ರಾಜಕೀಯಸ್ಥಿತಿ ಸೂಕ್ಷ್ಮವಾಗಿತ್ತು. ಸಿಡಿಯುಬಹುದಾದ ಸ್ಥಿತಿಯಲ್ಲಿತ್ತು. ಕಾಂಗ್ರೆಸ್ಸು ಸ್ವಾತಂತ್ರ್ಯ ಹೋರಾಟವನ್ನು ತೀವ್ರವಾಗಿ ನಡೆಸುತ್ತಿತ್ತು. ಬೆಂಗಳೂರಿನ ಕೆಂಪಾಂಬುಧಿ ತೀರದಲ್ಲಿ ಕಾಂಗ್ರೆಸ್ ಧ್ವಜವನ್ನು ಹಾರಿಸತೊಡಗಿ, ಲಾಠೀಚಾರ್ಜ್ ಗುಂಡೇಟುಗಳ ಕಹಿಘಟನೆಗಳಿಗೆ ಕಾರಣವಾಗಿತ್ತು. ಆಗ "ಶ್ರೀ"ಯವರು ಪರಿಷತ್ತಿನ ಕಾರ್ಯನಿರ್ವಾಹಕ ಸಮಿತಿಯಲ್ಲಿ ಇದ್ದಕ್ಕಿದ್ದಂತೆ, "ನಾವು ಕನ್ನಡ ಬಾವುಟವನ್ನು ಹಾರಿಸೋಣ" ಎಂದು ಸೂಚಿಸಿದರು. ಸಮಿತಿ ಯಲ್ಲಿ ಯಾರೊಬ್ಬರೂ ಮಾತನ್ನಾಡಲಿಲ್ಲ, ಸುಮ್ಮನೆ ಕುಳಿತಿದ್ದರು. ನಾನಾದರೊ—ಆಗ ನಾನು ಪರಿಷತ್ತಿನ ಕಾರ್ಯದರ್ಶಿಯಾಗಿದ್ದೆ—"ಈಗ ಬೇಡ ಈ ಕೆಲಸ, ಸ್ವಾಮಿ, ಮುಂದೆ ಯಾವಾಗಲಾದರೂ ಅನುಕೂಲ ವಾತಾ ವರಣದಲ್ಲಿ ಮಾಡೋಣ" ಎಂದು ಸ್ಫುಟವಾಗಿ ಹೇಳಿಬಿಟ್ಟೆ. "ಶ್ರೀ"ಯವರಿಗೆ ಸಂಕಟ ಉಂಟಾಯಿತು. "ನಮ್ಮ ಪರಿಷನ್ಮಂದಿರದ ಕಾಂಪೌಂಡ್ ಒಳಗೇ ನಾವು ಏತಕ್ಕೆ ನಮ್ಮ ಬಾವುಟ ಹಾರಿಸಬಾರದು. ನಮಗೆ ಆ ಸ್ವಾತಂತ್ರ್ಯ ಇಲ್ಲವೆ?" ಎಂದು ಅಬ್ಬರಿಸಿದರು. ನಾನು ತಂಪಾಗಿಯೇ ನನ್ನ ಆಕ್ಷೇಪವನ್ನು ಒತ್ತಿ ಹೇಳಿದೆ. ಆಮೇಲೆ ಒಬ್ಬೊಬ್ಬರಾಗಿ ಉಳಿದ ಸಮಿತಿ ಸದಸ್ಯರು ನನ್ನ ಹೇಳಿಕೆ ಸಮಯ ಸಂದರ್ಭಕ್ಕೆ ಯುಕ್ತವಾದ್ದೆಂದು ಒಪ್ಪಿಕೊಂಡರು. "ಶ್ರೀ" ಯವರೂ ಯತ್ನವಿಲ್ಲದೆ ಸಮ್ಮತಿಸಿದರು. ಆದರೂ ಕನ್ನಡ ಸಾಹಿತ್ಯದ ಕೆಲವು ಭಾಗಗಳನ್ನು ಸಂಗ್ರಹಿಸಿ ಒಟ್ಟು ಸೇರಿಸಿ, ಆ ಸಂಗ್ರಹಕ್ಕೆ "ಕನ್ನಡ ಬಾವುಟ" ಎಂಬ ಹೆಸರಿಟ್ಟರು. ಅದು ನನಗೂ ಸಂತೋಷ ತಂದುಕೊಟ್ಟಿತು. ಅಲ್ಲಿಂದ ಹಲವು ತಿಂಗಳುಗಳು ನನ್ನ ಅವರ ಸಂಬಂಧ ಕೊಂಚ ಗಡುಸಾಗಿಯೇ ಇತ್ತು. ಒಂದು ದಿವಸ ನನ್ನನ್ನು ಸಂಧಿಸಿದಾಗ ಹೀಗೆ ನುಡಿದರು: "ನೀವು ಬಹಳ ಜಿಗುಟಪ್ಪಾ; ಹಿಡಿದದ್ದನ್ನು ಬಿಡುವುದೇ ಇಲ್ಲ!" ಅದಕ್ಕೆ ನಾನು ಉತ್ತರಿಸಲೇ

ಇಲ್ಲ; ಅದನ್ನು ಗುರುವಿನ ಆಶೀರ್ವಾದವೆಂದೇ ಬಗೆದು ಸಂತೃಪ್ತನಾಗಿ ಮುಂದೆ ನಡೆದೆ!

"ಶ್ರೀ" ಅವರದ್ದು ಪ್ರಮುಖವಾಗಿ ಭಾವಜೀವನ; ತಾರ್ಕಿಕವೊ ವಿಚಾರ ಮುಖ್ಯವೋ ಆದದ್ದಲ್ಲ. ಜನರಿಗೆ ಸ್ಫೂರ್ತಿಕೊಟ್ಟು ಹುರಿದುಂಬಿಸಿ, ಬಡಿದೆಬ್ಬಿಸುವ ದೊಡ್ಡ ಕಾರ್ಯಕ್ಕೆ ತಕ್ಕುದಾದ ವ್ಯಕ್ತಿತ್ವ ಅವರದ್ದು. ಆ ಕಾಲಕ್ಕೆ ಅಂತಹುದೇ ಅತ್ಯಾವಶ್ಯಕವಾಗಿತ್ತು. ಅವರು ಬಂದರು, ಗೆದ್ದರು, ಅಮರರಾದರು!

ಎಸ್. ವಿ. ರಂಗಣ್ಣ




ತಿಳಿಯದವನಿಗೆ ಸುಲಭವಾಗಿ ತಿಳಿಸಬಹುದು; ಚೆನ್ನಾಗಿ ತಿಳಿದವನಿಗೆ ಮತ್ತೂ ಸುಲಭವಾಗಿ ತಿಳಿಸಬಹುದು; ತಿಳಿದೂ ತಿಳಿಯದಂತಿರುವ ಮೂರ್ಖನಿಗೆ ಬ್ರಹ್ಮನೂ ತಿಳಿಸಲಾರ.

—ಭರ್ತೃಹರಿ

ಮಾಡಬಾರದ ಕಾರ್ಯಗಳಲ್ಲಿ ನಿರತನಾಗುವವನನ್ನು ಯಾರು ತಡೆಯುವರೋ ಅವರೇ ಮಿತ್ರರು.

—ಭಾಸ

ಮನುಷ್ಯನು ಉತ್ತಮ ಗುಣಸಂಪನ್ನನಾಗಲು ಪ್ರಯತ್ನಿಸಬೇಕು. ಗುಣಗಳಿಂದ ಪ್ರಾಪ್ತವಾಗದ್ದು ಯಾವುದೂ ಇಲ್ಲ.

—ಶೂದ್ರಕ

# ಮೂರು ಘಟನೆಗಳು

ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ ಒಂದು ಮುಖ್ಯ ಸಮಾರಂಭ. ತಮಿಳಿನ ಅತ್ಯಂತ ಪ್ರಾಚೀನ ಗ್ರಂಥವಾದ 'ಕುರಳ್' ಕುರಿತು ಪ್ರಸಿದ್ಧ ವಿದ್ವಾಂಸರೊಬ್ಬರು ಭಾಷಣ ಮಾಡುವ ಏರ್ಪಾಡು ಆಗಿತ್ತು. ಅಂದಿನ ಸಭೆಗೆ ಸಂಘದ ಅಧ್ಯಕ್ಷರಾಗಿದ್ದ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರೇ ಅಗ್ರಾಸನ ವಹಿಸಿಕೊಂಡಿದ್ದರು. ಅನೇಕ ದಿನಗಳಿಂದ ನಿರೀಕ್ಷಿಸಿದ್ದ ಈ ಸಮಾರಂಭಕ್ಕೆ ಜನ ಬಹುಸಂಖ್ಯೆಯಲ್ಲಿ ಬಂದಿದ್ದರು. ಉಪನ್ಯಾಸಮಂದಿರ ಭರ್ತಿಯಾಗಿತ್ತು. ಆರಂಭದಲ್ಲಿ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಅಂದು ಕುರಳ್ ಕುರಿತು ಪ್ರವಚನ ಮಾಡಲಿದ್ದ ಪಂಡಿತರನ್ನು ಸಭೆಗೆ ಪರಿಚಯ ಮಾಡಿಸಿದರು. ಆಗ ಉಪನ್ಯಾಸಕರು ತಮ್ಮ ಪಾಂಡಿತ್ಯಪೂರ್ಣವಾದ ಭಾಷಣ ಆರಂಭಿಸಿ ನಿರರ್ಗಳವಾಗಿ ಒಂದು ಗಂಟೆಯ ಹೊತ್ತು ಮಾತನಾಡಿದರು. ಕುರಳ್ ಗ್ರಂಥದ ಪ್ರಾಶಸ್ತ್ಯ, ಅದನ್ನು ರಚಿಸಿದ ಮಹಾಕವಿಯ ಘನತೆ, ಆ ಗ್ರಂಥ ದೇಶವಿದೇಶಗಳಲ್ಲಿ ಪೂಜ್ಯತೆಯನ್ನು ಹೊಂದಿರುವ ಬಗೆ, ಅದು ಜಗತ್ತಿನ ಪ್ರಸಿದ್ಧ ಭಾಷೆಗಳಿಗೆಲ್ಲ ಅನುವಾದವಾಗಿರುವ ಸಂಗತಿ, ಆ ಗ್ರಂಥದಲ್ಲಿ ಪದ್ಯಗಳ ಸಂಖ್ಯಾನಿರ್ಣಯ, ಎಲ್ಲಕ್ಕಿಂತ ಹೆಚ್ಚಾಗಿ ಆ ಗ್ರಂಥ ರಚಿತವಾದ ಕಾಲನಿರ್ಣಯದ ಸಮಸ್ಯೆ – ಇವೇ ಮೊದಲಾದ ಅನೇಕ ಮಹತ್ವದ ಸಂಗತಿಗಳನ್ನೆಲ್ಲ ಉಪನ್ಯಾಸಕರು ವಿಸ್ತಾರವಾಗಿ ನಿರೂಪಿಸಿ ಕುರಳ್ ಗ್ರಂಥದ ಹಿರಿಮೆಗರಿಮೆಗಳ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಆದರೆ ಅವರು ಮರೆತು ಕೂಡ ಒಂದು ಪದ್ಯವನ್ನೂ ಹೇಳಲಿಲ್ಲ! ಅಥವಾ ಅವರು ಮೊದಲೇ ಹಾಕಿಕೊಂಡಿದ್ದ ಯೋಜನೆಯಂತೆ ಕುರಳ್ ಗ್ರಂಥದ ಲೋಕಪ್ರಸಿದ್ಧಿಯನ್ನು ವಿವರಿಸಿ ಹೇಳುವುದಕ್ಕೇ ವೇಳೆ ಸಾಲದೇ ಹೋದಾಗ ಇನ್ನು ಪದ್ಯಗಳನ್ನು ಹೇಳಿ ಅವುಗಳ ಅರ್ಥವಿವರಿಸುವುದಕ್ಕೆ ಅವಕಾಶವೆಲ್ಲಿ ಬರಬೇಕು? ಆ ತಮಿಳು ವಿದ್ವಾಂಸರು ತಮಿಳರಿಗೆ ಆ ಗ್ರಂಥದ ವಿಚಾರದಲ್ಲಿರುವ ಅಪಾರ ಭಕ್ತಿಗೌರವಗಳನ್ನು ವರ್ಣಿಸಿ ಹೊಗಳಿ ಆ ಭಾಷಣ ಮಾಡಲು ತಮಗೆ ಅವಕಾಶ ಕಲ್ಪಿಸಿಕೊಟ್ಟ ಸಂಘದ ಅಧಿಕಾರಿಗಳಿಗೆ ವಂದನೆ ಹೇಳಿ ತಮ್ಮ ಉಪನ್ಯಾಸವನ್ನು ಮುಗಿಸಿದರು. ಆದರೆ ಆ ಶ್ರೋತೃಗಳಿಗೆ ಕುರಳ್ ಗ್ರಂಥದ ಸ್ವಾರಸ್ಯವೇನೆಂಬುದೇ ತಿಳಿಯಲಿಲ್ಲ!

ಆಗ ಸಭೆಯ ಅಧ್ಯಕ್ಷರಾಗಿದ್ದ ಪ್ರೊಫೆಸರ್ ಶ್ರೀಕಂಠಯ್ಯನವರು ತಮ್ಮ ಅಧ್ಯಕ್ಷೋಪನ್ಯಾಸವನ್ನು ಆರಂಭಿಸುತ್ತ, ತಮ್ಮ ತಮಿಳು ಉಚ್ಚಾರಣೆಯನ್ನು

ಗಮನಿಸಿ ನಗಬಾರದೆಂದು ಆ ಉಪನ್ಯಾಸಕರಲ್ಲಿ ವಿನಂತಿಸಿಕೊಂಡು ಕುರಳ್ ಗ್ರಂಥದ ಒಂದೊಂದೇ ಪದ್ಯವನ್ನು ಉದಾಹರಿಸಿ ಅರ್ಥವಿವರಣೆ ಮಾಡತೊಡಗಿದಾಗ ಸಭೆಗೆ ಬಹಳ ಬೆರಗೇ ಆಯಿತು. "ಈ ಇಂಗ್ಲಿಷ್ ಪ್ರೊಫೆಸರಿಗೆ ತಮಿಳಿನಲ್ಲಿಯೂ ಎಷ್ಟು ಆಳವಾದ ಪಾಂಡಿತ್ಯ!" ಎಂದು ಆಶ್ಚರ್ಯಪಟ್ಟರು. ಏನೂ ಪೂರ್ವಸಿದ್ಧತೆಯಿಲ್ಲದೆ ಆಶುವಾಗಿ ಕುರಳ್ ಪದ್ಯಗಳನ್ನು ತಡೆಬಡೆಯಿಲ್ಲದೆ ಬಾಯಲ್ಲಿ ಹೇಳುತ್ತ ಅವುಗಳನ್ನು ಕನ್ನಡ ಲಿಪಿಯಲ್ಲಿ ಕಪ್ಪುಹಲಗೆಯ ಮೇಲೆ ಬರೆದು ಆ ವಾಕ್ಯಗಳ ಅರ್ಥಸ್ವಾರಸ್ಯವನ್ನು ವಿವರಿಸಿ ಹೇಳಿದಾಗ ಅಂದಿನ ಸಭಿಕರ ಸಂತೋಷ ಹೇಳತೀರದಂತಾಯಿತು. ಆ ತಮಿಳು ಪಂಡಿತರ ಪ್ರವಚನ ಕೇವಲ ಉಪಕ್ರಮ ಭಾಷಣವೆನಿಸಿತು. ಶ್ರೀಕಂಠಯ್ಯನವರದೇ ಪ್ರಧಾನ ಭಾಷಣವಾಯಿತು! ವೇಳೆಯ ಪರಿವೆಯೇ ಇಲ್ಲದೆ ಸಭಿಕರು ಕುರಳ್ ಶ್ರವಣದಲ್ಲಿ ಮಗ್ನರಾದರು. ಇಂಗ್ಲಿಷ್, ಕನ್ನಡ, ಸಂಸ್ಕೃತಗಳಲ್ಲಿಯೇ ಅಲ್ಲದೆ ತಮಿಳಿನಲ್ಲಿಯೂ ಶ್ರೀಯವರು ವಿಶೇಷ ಪಾಂಡಿತ್ಯವನ್ನು ಗಳಿಸಿದ್ದರೆಂಬುದು ಆಗ ಎಲ್ಲರಿಗೂ ವೇದ್ಯವಾಯಿತು. ಹಳಗನ್ನಡದ ವ್ಯಾಸಂಗ ಮಾಡುವವರಿಗೆ ತಮಿಳಿನ ಪರಿಚಯವೂ ಇದ್ದರೆ ಒಳ್ಳೆಯದೆಂದು ಶ್ರೀಯವರು ಹೇಳುತ್ತಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘದವರು ಜ್ಞಾನಪ್ರಸಾರ ಕಾರ್ಯವನ್ನು ಕೈಕೊಂಡು ಕಾಲೇಜುಗಳಿಲ್ಲದ ಸಣ್ಣಸಣ್ಣ ಊರುಗಳಲ್ಲಿ ಉಪನ್ಯಾಸ ಸಪ್ತಾಹಗಳನ್ನು ಮೊದಮೊದಲು ನಡೆಸಿದರು. ಅಧ್ಯಾಪಕರು ಕಾಲೇಜುಗಳಲ್ಲಿ ತಾವು ಬೋಧಿಸುತ್ತಿದ್ದ ಶಾಸ್ತ್ರಗಳನ್ನೇ ಈ ಸಾರ್ವಜನಿಕ ಉಪನ್ಯಾಸಗಳಲ್ಲಿ ಕನ್ನಡದಲ್ಲಿ ಹೇಳಬೇಕೆಂದು ಏರ್ಪಾಡಾಗಿತ್ತು. ಒಂದೇ ಊರಿನಲ್ಲಿ ಏಳು ದಿನ ಅಖಂಡವಾಗಿ ನಿಂತು ದಿನವೂ ಮೂರು ಉಪನ್ಯಾಸಗಳನ್ನು ನಡೆಸುವುದು ಆರಂಭದ ಕ್ರಮವಾಗಿತ್ತು. ಆದರೆ ಇದು ಕಷ್ಟಸಾಧ್ಯವೆನಿಸಿತು. ಅಂಥ ಸಪ್ತಾಹಗಳು ವರ್ಷದಲ್ಲಿ ಎರಡೋ ಮೂರೋ ನಡೆದರೆ ಹೆಚ್ಚು. ಹೆಚ್ಚಿನ ನಗರಗಳಿಗೆ ಇದರ ಪ್ರಯೋಜನ ಲಭಿಸುತ್ತಿರಲಿಲ್ಲ. ಅಲ್ಲದೆ ಎಲ್ಲ ಉಪಾಧ್ಯಾಯರಿಗೂ ಒಟ್ಟಿಗೆ ಏಳು ದಿನಗಳ ಅವಕಾಶ ದೊರೆಯುವುದು ಅಸಾಧ್ಯ. ಆದ್ದರಿಂದ ಕಾಲೇಜುಗಳು ನಡೆಯುತ್ತಿರುವಾಗಲೇ ವಾರದ ಕೊನೆಯಲ್ಲಿ—ಶನಿವಾರ, ಭಾನುವಾರ ಹತ್ತಿರದ ಊರಿಗೆ ಹೋಗಿ ಎರಡು ದಿನ ಉಪನ್ಯಾಸ ಮಾಡುವ ಒಂದು ವ್ಯವಸ್ಥೆಯಾಯಿತು. ಏಳು ವಾರಗಳ ಕಾಲ ಹೀಗೆ ಒಂದೇ ವಿಷಯವನ್ನು ಕುರಿತು ಭಾಷಣ ಮಾಡಿ, ಆ ಏಳು ಭಾಷಣ

ಗಳನ್ನೂ ಬರೆದು ಕೊಡುವುದು, ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ ಅಗ್ಗದ ಬೆಲೆಗೆ ಕೊಟ್ಟರೆ ಹೆಚ್ಚು ಜನಕ್ಕೆ ಉಪಯೋಗವಾಗಬಹುದೆಂಬ ಯೋಚನೆ ಬಂತು. ಇದನ್ನು Week end Lecture Camp ಅಥವಾ Intensive Lecture Camp ಎಂದು ಕರೆಯಲಾಯಿತು. ಇಂಥ ಒಂದು ಉಪನ್ಯಾಸ ಶಿಬಿರ ಬೆಂಗಳೂರು ಜಿಲ್ಲೆ ದೇವನಹಳ್ಳಿಯಲ್ಲಿ ಏರ್ಪಾಟಾಗಿತ್ತು.

ಶನಿವಾರ ಮಧ್ಯಾಹ್ನವೇ ಉಪನ್ಯಾಸಕರೆಲ್ಲ ದೇವನಹಳ್ಳಿ ಸೇರಿ ಪ್ರವಾಸಿ ಬಂಗಲೆಯಲ್ಲಿ ಬಿಡಾರ ಹೂಡಿಯಾಯಿತು. ಈ ಉಪನ್ಯಾಸಮಾಲೆಯ ಆರಂಭೋತ್ಸವಕ್ಕೆ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಬರುವ ವ್ಯವಸ್ಥೆ ಆಗಿತ್ತು. ಆ ಸುಪ್ರಸಿದ್ಧ ವಿದ್ವಾಂಸರು ತಮ್ಮ ಊರಿಗೆ ಬರುವರೆಂಬುದೇ ದೇವನಹಳ್ಳಿಯ ಜನರನೇಕರಿಗೆ ಸಂಭ್ರಮದ ವಿಷಯವಾಗಿತ್ತು. ಆ ಊರಿನ ಪುರಸಭೆಯ ಅಧ್ಯಕ್ಷ ಶ್ರೀ ನಾಗರಾಜರಾಯರು ಬಿ. ಎಂ. ಶ್ರೀಯವರನ್ನು ಹಾರ್ದಿಕವಾಗಿ ಸ್ವಾಗತಿಸಿ ಸತ್ಕಾರ ಮಾಡುವ ಉತ್ಸಾಹದಲ್ಲಿದ್ದರು. ಶ್ರೀಕಂಠಯ್ಯನವರು ಬೆಂಗಳೂರಿನಿಂದ ಕಾರಿನಲ್ಲಿ ಬರುವ ವೇಳೆಗೆ ಶ್ರೀ ನಾಗರಾಜರಾಯರು ಗೆಳೆಯರೊಂದಿಗೆ ಸಜ್ಜಾಗಿ ಕಾದಿದ್ದು ಶ್ರೀಯವರು ಕಾರಿನಿಂದ ಇಳಿಯುತ್ತಲೇ ಅವರಿಗೆ ಪರಿಮಳಭರಿತವಾದ ಮಲ್ಲಿಗೆ ಹೂವಿನ ದಂಡೆಯನ್ನು ಹಾಕಿ ನಿಂಬೆಹಣ್ಣು ಕೊಟ್ಟು ವಂದನೆ ಸಲ್ಲಿಸಿದರು. ಅಷ್ಟು ಹೊತ್ತಿಗೆ ಸರಿಯಾಗಿ ಜೋಡಿ ಓಲಗ ಆರಂಭವಾಯಿತು! ನಾಗರಾಜರಾಯರು ಪ್ರೊಫೆಸರಿಗೆ ವೈಭವದ ಸ್ವಾಗತವನ್ನೇ ಏರ್ಪಡಿಸಿದ್ದರು. ಪ್ರೊಫೆಸರು ಬಿಡಾರದೊಳಕ್ಕೆ ಹೋಗಿ ಕಾಫಿ ಸ್ವೀಕರಿಸಿ ಹೊರಬರುತ್ತಲೂ ಓಲಗದೊಡನೆ ಅಧ್ಯಾಪಕ ಸಂಘದವರೆಲ್ಲ ಊರಿನ ಮಧ್ಯದ ವೇಣುಗೋಪಾಲಸ್ವಾಮಿಯ ಮಂದಿರದ ತನಕ ನಡೆದು ಹೋಗುವ ವ್ಯವಸ್ಥೆಯಾಗಿತ್ತು. ಅಚ್ಚುಕಟ್ಟಾದ ಸೂಟು ಧರಿಸಿ ಠೀಕಿಕಟ್ಟಿದ ಸರಿಗೆಯ ರುಮಾಲಿನೊಡನೆ ಶ್ರೀಯವರು ಊರಿನಲ್ಲಿ ಮೆಲ್ಲಗೆ ನಡೆದುಬರುತ್ತಿದ್ದ ಆ ದೃಶ್ಯ ಮದುವೆಯ ದಿಬ್ಬಣದಂತೆ ಕಂಡಿತೆಂದು ಊರಿನ ಪ್ರಮುಖರೊಬ್ಬರು ಹೇಳಿದ ನೆನಪು. ಮುಂದೆ ಉತ್ಸಾಹದಿಂದ ನುಡಿಸುತ್ತಿದ್ದ ನಾದಸ್ವರದ ಜೋಡಿ ಮೇಳ. ಅವರ ಹಿಂದೆ ಕೆಲವರು ಪುರಸಭಾ ಸದಸ್ಯರು, ಆಮೇಲೆ ಪುರಸಭೆಯ ಅಧ್ಯಕ್ಷರು, ತಾಲ್ಲೂಕು ಅಮಲದಾರರು, ಅವರ ಹಿಂದೆ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರು, ಅವರಿಗೆ ಎರಡು ಹೆಜ್ಜೆ ಹಿಂದೆ ಅಧ್ಯಾಪಕ ಸಂಘದ ಪ್ರಮುಖರಾದ ಪ್ರೊ|| ಎಸ್. ವಿ. ರಂಗಣ್ಣನವರು–ಅವರೂ ಠಾಕ್‌ಠೀಕಾಗಿ ದಿರುಸುಹಾಕಿ ಕೊಂಡಿದ್ದವರೇ–ಆಮೇಲೆ ವಿಶ್ವವಿದ್ಯಾನಿಲಯದ ಅಧ್ಯಾಪಕರು, ಆಮೇಲೆ

ಊರಿನ ನಾಗರಿಕರು—ಹೀಗೆ ದಿಬ್ಬಣ ವೈಭವದಿಂದ ಸಾಗಿತ್ತು. ಊರಿನ ಜನರಿಗೆ ಇದೊಂದು ಸೋಜಿಗ. ಈ ಮೆರವಣಿಗೆ ಎಲ್ಲಿಗೆ ಹೋಗುವುದೆಂಬ ಕುತೂಹಲ ಕೆಲವರಿಗೆ. ಶ್ರೀ ನಾಗರಾಜರಾಯರು ಅಲ್ಲಲ್ಲಿ ನಿಂತು ಪ್ರಮುಖ ನಾಗರಿಕರನ್ನು ತಮ್ಮ ಜತೆಗೆ ಕರೆದುಕೊಳ್ಳುತ್ತಿದ್ದರು. ಇನ್ನೂ ಸಿದ್ಧರಾಗಿಲ್ಲದವರನ್ನು "ದೇವಸ್ಥಾನಕ್ಕೆ ಬನ್ನಿ, ಬೇಗಬನ್ನಿ" ಎಂದು ಆಹ್ವಾನಿಸುತ್ತಿದ್ದರು. ಈ ಸಂಭ್ರಮದ ಮೆರವಣಿಗೆ ಆ ಅರ್ಧಮೈಲಿ ದೂರ ಸಾಗುವಷ್ಟರಲ್ಲಿ ನಮ್ಮೊಡನೆ ನೂರಾರು ಜನ ಗುಂಪು ಕೂಡಿಕೊಂಡು ಬಂದರು.

ವೇಣುಗೋಪಾಲಸ್ವಾಮಿಯ ಆಲಯವನ್ನು ಸೇರಿದಾಗ ಹೆಬ್ಬಾಗಿಲ ಬಳಿ ಶ್ರೀಯವರಿಗೆ ಅರ್ಚಕರು ಪೂರ್ಣ ಕುಂಭದ ಸ್ವಾಗತ ಮಾಡಿ ಒಳಗೆ ಕರೆದೊಯ್ದರು. ದೇವರಿಗೆ ಮಂಗಳಾರತಿ ಬೆಳಗಿಯಾಯಿತು. ಶ್ರೀಯವರು, ಉಪನ್ಯಾಸ ವೇದಿಕೆಯನ್ನೇರಿ ಕುಳಿತುಕೊಳ್ಳುವ ವೇಳೆಗೆ ದೇವಾಲಯದಲ್ಲೆಲ್ಲ ಜನ ಕಿಕ್ಕಿರಿದು ಸೇರಿದ್ದರು. ತಾಲ್ಲೂಕು ಅಮಲದಾರರ ಸ್ವಾಗತ ಭಾಷಣ, ಶ್ರೀರಂಗಣ್ಣನವರ ಪರಿಚಯ ಭಾಷಣ, ನಡೆದು ಜನ ತಮ್ಮ ತಮ್ಮ ಜಾಗದಲ್ಲಿ ಕುದುರಿಕೊಂಡು ಕುಳಿತ ಮೇಲೆ ಶ್ರೀಯವರು ಅಧ್ಯಾಪಕರು ಕೈಕೊಂಡಿದ್ದ ಜ್ಞಾನ ಪ್ರಸಾರ ಕಾರ್ಯದ ಹಿರಿಮೆಯನ್ನು ವಿವರಿಸಿ ಕನ್ನಡಿಗರು ತಮ್ಮ ಭಾಷೆಯಲ್ಲಿಯೇ ಸಮಸ್ತ ಶಾಸ್ತ್ರಗಳನ್ನು ಕಲಿಯುವಂತಾಗಬೇಕು, ಕನ್ನಡ ಬೆಳೆಯಬೇಕು, ಕನ್ನಡ ನಾಡಿನಲ್ಲಿ ಕನ್ನಡವೇ ಆಡಳಿತ ಭಾಷೆಯಾಗಬೇಕು" ಎಂದು ಸಾರಿಹೇಳಿ ನೆರೆದಿದ್ದವರಿಗೆ 'ಕನ್ನಡ ದೀಕ್ಷೆ' ಕೊಟ್ಟರು. ಅವರ ಅಂದಿನ ಭಾಷಣ ಲೋಕೋತ್ತರವಾಗಿತ್ತು. ಆಗ್ಗೆ ಕನ್ನಡ ಶೀಘ್ರಲಿಪಿ ಇಲ್ಲದಿದ್ದುದರಿಂದ ಆ ಉಪದೇಶ ಭಾಷಣ ಗಾಳಿಯ ಪಾಲಾಯಿತು. ಅದನ್ನು ಹಿಡಿದಿಟ್ಟುಕೊಳ್ಳುವುದು ಸಾಧ್ಯವಾಗಲಿಲ್ಲ. ಅಂದಿನ ಕಾರ್ಯಕ್ರಮ ಮುಗಿದು ನಾವು ಬಿಡಾರ ಸೇರಿ ಮೇಲೆ ಭೋಜನ ಕಾಲದಲ್ಲಿ ಯಾರೋ ಗೆಳೆಯರೊಬ್ಬರು ಅಂದಿನ ಮೆರವಣಿಗೆಯ ವೈಭವವನ್ನು ಮೆಚ್ಚಿ ಹೊಗಳತೊಡಗಿದಾಗ ಶ್ರೀಯವರು ನಸುನಗುತ್ತ, "ಆ ಮೆರೆವಣಿಗೆಯ ರಹಸ್ಯ ಇನ್ನೇನೂ ಇಲ್ಲ. ಈ ತಾಳಮೇಳಗಳ ಗದ್ದಲದಿಂದ ಆಕರ್ಷಿತರಾದ ಜನರೇ ನಮ್ಮ ಭಾಷಣಗಳಿಗೆ ಶ್ರೋತೃಗಳಾದರು. ಇದು ಸಭಾಮಂದಿರವನ್ನು ಭರ್ತಿಮಾಡುವ ಜಾಣ್ಮೆ" ಎಂದರು. ಶ್ರೀಯವರೂ ಅಪರೂಪವಾಗಿಯಾದರೂ ಹಾಸ್ಯಪ್ರಿಯರಾಗಿರುತ್ತಿದ್ದರೆಂದು ಅರಿವಾಯಿತು. ಅವರಿಗೆ ತಮ್ಮ ವಿಚಾರದಲ್ಲಿ ಹಳೆಯ ಶಿಷ್ಯಕೋಟಿಗೆ ಗಾಢ ಭಕ್ತಿ ಗೌರವಗಳಿದ್ದುದು ತಿಳಿಯದ ಸಂಗತಿಯಲ್ಲ.

ಶ್ರೀಯುವರು ಕನ್ನಡ ನಾಡಿನ ಉದ್ದಗಲಕ್ಕೂ ಸಂಚಾರಮಾಡಿ ಕನ್ನಡ ಭಾಷಾಪ್ರಚಾರ ದೀಕ್ಷೆಯನ್ನು ಕೈಕೊಂಡರಷ್ಟೆ. ಕನ್ನಡದ ರಕ್ಷಣೆ ಅವರಿಗೆ ಅತ್ಯಂತ ಮುಖ್ಯ ವಿಚಾರವಾಯಿತು. ಒಂದು ಕಾಲಕ್ಕೆ ಮರೆತು ಕೂಡ ಒಂದು ಕನ್ನಡ ಮಾತನ್ನೂ ಆಡದೆ ಇಂಗ್ಲಿಷನ್ನೇ ಮೆರೆಯಿಸುತ್ತಿದ್ದ ಈ ಇಂಗ್ಲಿಷ್ ಪ್ರಾಧ್ಯಾಕರು ಕನ್ನಡ ಭಕ್ತರೇ ಆದರು. ಕನ್ನಡ ನಾಡಿನ ಏಕೀಕರಣ, ಅವರ ಜೀವನದ ಪರಮ ಆಕಾಂಕ್ಷೆಯೇ ಆಯಿತು. ಕನ್ನಡದ ಗಡಿನಾಡಿನಲ್ಲಿ, ಕನ್ನಡದ ಹೊರನಾಡಿನಲ್ಲಿ ಎಲ್ಲ ಕಡೆಗಳಲ್ಲಿಯೂ ಸಂಚರಿಸಿ ಶ್ರೀಯುವರು ಕನ್ನಡ ಸಂಘಗಳನ್ನು ಹುಟ್ಟುಹಾಕಿದರು. ಕನ್ನಡಿಗರು ಜಾಗೃತರಾಗಬೇಕು. ಕನ್ನಡದ ಮೇಲ್ಮೆಯನ್ನು ಸಾಧಿಸಬೇಕು ಎಂದು ಅವರು ನಿರಂತರವಾಗಿ ಜನರಿಗೆ ಉಪದೇಶಿಸಿದರು. ಈ ಕಾರ್ಯಕ್ಕಾಗಿ ಶ್ರೀಯುವರು ತಮ್ಮ ಅನಾರೋಗ್ಯವನ್ನೂ ಲೆಕ್ಕಿಸದೆ ಕನ್ನಡ ನಾಡಿನಲ್ಲೆಲ್ಲ ಅಡ್ಡಾಡಿ ಹೋದಕಡೆಗಳಲ್ಲೆಲ್ಲ ತಮ್ಮ ಮೂಲ ಮಂತ್ರವನ್ನು "ಸಿರಿಗನ್ನಡಂ ಗೆಲ್ಗೆ; ಆಳ್ಗೆ ಕನ್ನಡ ತಾಯೆ" ಉಪದೇಶಿಸಿದರು. ಅಪ್ರಸಿದ್ಧವಾದ ಸ್ಥಳಗಳಿಗಲ್ಲದೆ ಗ್ರಾಮಗಳಿಗೂ ಹೋಗಿ ಶ್ರೀಯುವರು ಕನ್ನಡ ಪ್ರಸಾರ ನಡೆಸಿದರು. ಅಂಥ ಊರುಗಳಲ್ಲಿ ಆದವಾನಿ ತಾಲ್ಲೂಕಿನ ಯಮ್ಮಿಗನೂರು ಒಂದು. ಅಲ್ಲಿನ ನಿವಾಸಿಗಳೆಲ್ಲ–ನೂರಕ್ಕೆ ನೂರರಷ್ಟು ಕನ್ನಡ ಜನ. ಆದರೆ ಅಂದಿನ ಮದರಾಸು ಆಧಿಪತ್ಯಕ್ಕೆ ಸೇರಿದ ಬಳ್ಳಾರಿಯ ಜಿಲ್ಲೆಯಲ್ಲಿ ಸರ್ಕಾರದ ಆಡಳಿತ ತೆಲುಗಿನಲ್ಲಿಯೇ ನಡೆಯುತ್ತಿತ್ತು. ಅಲ್ಲಿನ ಜಿಲ್ಲಾ ಪರಿಷತ್ತಿನ ಹೈಸ್ಕೂಲಿನಲ್ಲಿ ಶಿಕ್ಷಣ ಮಾಧ್ಯಮವೂ ತೆಲುಗೇ ಆಗಿತ್ತು. ಅಂಥ ಊರಿಗೆ ಶ್ರೀಯುವರು ರಾಯಚೂರಿನಿಂದ ಹಿಂತಿರುಗಿ ಬರುತ್ತ ರಾತ್ರಿ ಒಂದು ಗಂಟೆ ವೇಳೆಗೆ ತಲುಪಿದರು. ಶ್ರೀಯುವರ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಸ್ಥಳದ ಪ್ರಮುಖರು ಆ ಅಪರಾತ್ರಿಯಲ್ಲಿಯೇ ಅವರನ್ನು ಇದಿರುಗೊಂಡು ಸ್ವಾಗತಿಸಿ ಅವರು ವಿಶ್ರಾಂತಿ ತೆಗೆದುಕೊಳ್ಳಲು ತಕ್ಕ ವಸತಿ ಕಲ್ಪಿಸಿ ಅಂದು ಅಲ್ಲಿಯೇ ಉಳಿದುಕೊಂಡು ಮಾರನೆಯ ದಿನ ಬೆಳಿಗ್ಗೆ ಭಾಷಣ ಮಾಡಬೇಕೆಂದು ಕೇಳಿಕೊಂಡರು. ಆದರೆ ಕನ್ನಡ ಪ್ರಚಾರ ದೀಕ್ಷಿತರಾಗಿದ್ದ ಶ್ರೀಯುವರು "ನಾಳೆ ಬೆಳಿಗ್ಗೆ ಆದವಾನಿಯಲ್ಲಿ ಕಾರ್ಯಕ್ರಮವಿದೆ. ಇಂದು ಇಲ್ಲಿ ಈಗಲೇ ಭಾಷಣ" ಎಂದಾಗ ಆ ವೃದ್ಧರ ಕನ್ನಡ ದೀಕ್ಷೆಗೆ ಬೆರಗಾದ ಆ ಜನ ವಿಧಿಯಿಲ್ಲದೆ ಕಹಳೆ ಊದಿಸಿದರು. ಕೂಡಲೆ ನಿದ್ದೆಯಿಂದೆದ್ದ ನಾಗರಿಕರು ಮೊದಲೇ ಗೊತ್ತಾಗಿದ್ದಂತೆ ಆ ಊರಿನ ಎದುರು ಬಸವಣ್ಣನ ಗುಡಿಯ ಮುಂದೆ ಸೇರಿದರು. ಶ್ರೀಯುವರು ಆ ಕನ್ನಡ ಪ್ರೇಮಿಗಳಿಗೆ ತಮ್ಮ ಕಳಕಳಿಯ ಉಪದೇಶ ಮಾಡಿ ಕನ್ನಡ ದೀಕ್ಷೆ

ಕೊಟ್ಟರು. ಈಗಲೂ ಆ ಊರಿನ ಜನ "ಶ್ರೀಕಂಠಪ್ನೋರು ಬಂದಿದ್ದಾಗ" ನಡೆದ ಸಭೆಯ ವೈಭವವನ್ನು ಉತ್ಸಾಹದಿಂದ ಸ್ಮರಿಸಿಕೊಳ್ಳುವರು, ಅಂದು ಕನ್ನಡದ ಗಡಿನಾಡಾಗಿದ್ದ ಯಮ್ಮಿಗನೂರು ಇಂದು 'ಹೊರನಾಡು' ಆಗಿದೆ. ಬಳ್ಳಾರಿ ಜಿಲ್ಲೆಗೆ ಸೇರಿದ್ದ ಆದವಾನಿ, ಯಮ್ಮಿಗನೂರು, ಆಲೂರು ಮತ್ತು ರಾಯದುರ್ಗಗಳು ಕರ್ನೂಲು ಜಿಲ್ಲೆಗೆ ಸೇರಿ ಆಂಧ್ರ ಪ್ರಾಂತ್ಯದಲ್ಲಿ ಅಡಕವಾಗಿ ಹೋಗಿದೆ! ಕನ್ನಡಿಗರ ಹೆಮ್ಮೆಯ ಮಂತ್ರಾಲಯ ಈಗ ಆಂಧ್ರ ಪ್ರದೇಶಕ್ಕೆ ಸೇರಿ ಹೋಗಿದೆ! ಶ್ರೀಯವರು ಆ ಪ್ರಾಂತ್ಯದಲ್ಲಿ ಮಾಡಿದ ಸಾಹಸವೆಲ್ಲ ನಿಷ್ಫಲವಾಗಿ ಹೋಗಿದೆ. ಆಮೇಲಿನ ಕನ್ನಡಿಗರು ಎಚ್ಚತ್ತುಕೊಳ್ಳಲಿಲ್ಲ; ಈ ಗಡಿ ನಾಡಿನ ಕನ್ನಡಿಗರಿಗೆ ಅಗತ್ಯವಾಗಿದ್ದ ಕುಮ್ಮಕ್ಕು ಕೊಡಲಿಲ್ಲ. ಆ ಉತ್ಸಾಹ ಕನ್ನಡಿಗರನ್ನು ನಮ್ಮೊಂದಿಗೆ ಉಳಿಸಿಕೊಳ್ಳಲು ನಾವು ಶಕ್ತರಾಗಲಿಲ್ಲ.

ಕೆ. ವೆಂಕಟರಾಮಪ್ಪ



ಜ್ಞಾನಿಯ ದಾರಿದ್ರ್ಯಕ್ಕಿಂತ ಅಜ್ಞಾನಿಯ ಶ್ರೀಮಂತಿಕೆಯಿಂದ ಸಮಾಜಕ್ಕೆ ಹಾನಿ ಹೆಚ್ಚು.

—ತಿರಕ್ಕುರಳ್

ನಾವು ಏನನ್ನು ಹೊಂದಿರುವುದಿಲ್ಲವೋ ಅವಕ್ಕಾಗಿ ನಾವು ಹೆಚ್ಚು ಆಸೆ ಪಡುವುದು ನಮ್ಮ ಹವ್ಯಾಸವಾಗಿದೆ.

—ಪಬ್ಲಿಯನ್ ಸೈರಸ್

ಇತಿಹಾಸದ ಪರಿಣಾಮಗಳು ಎರಡು; ಒಂದು ಬೌದ್ಧಿಕ ಸಂತೋಷ, ಇನ್ನೊಂದು ನೈತಿಕ ದುಃಖ,

—ಎಮರ್‌ಸನ್

# ನಮ್ಮ ಬದುಕು ಶ್ರೀಮಯವಾದದ್ದು ಶ್ರೀಯವರಿಂದ ತಾನೆ ?

ಸಾಗರಕ್ಕೆ ಸಾಗರವೇ ಹೋಲಿಕೆ, ಆಕಾಶಕ್ಕೆ ಆಕಾಶವೇ ಹೋಲಿಕೆ, ರಾಮ ರಾವಣರ ಯುದ್ಧಕ್ಕೆ ರಾಮರಾವಣರ ಯುದ್ಧವೇ ಹೋಲಿಕೆ ಎಂದು ಹೇಳುವ ಹಳೆಯ ಹೇಳಿಕೆಯೊಂದುಂಟು. ಇವು ಅನನ್ಯ ಸಾಧಾರಣವಾದಂಥವು, ಉಪಮಾತೀಥವಾದಂಥವು ಎನ್ನುವುದು ಇಂತಹ ಮಾತುಗಳ ಅರ್ಥ. ಹಾಗೆ ನೋಡಿದರೆ ಶ್ರೀಯವರ ವ್ಯಕ್ತಿತ್ವ, ಮನೋಧರ್ಮ, ಸಾಧನೆ ಮತ್ತು ಸಿದ್ಧಿಗಳ ವಿಷಯದಲ್ಲಿಯೂ ಹೀಗೆಯೇ ಹೇಳಬಹುದೆಂದು ತೋರುತ್ತದೆ. ಶ್ರೀಯವರಿಗೆ ಶ್ರೀಯವರೇ ಹೋಲಿಕೆ ಎಂದು ಹೇಳಿದರೆ ಅದು ಸಮಂಜಸವೂ ಆಗುತ್ತದೆ. ಸಾಧುವೂ ಆಗುತ್ತದೆ. ಅವರ ವಕ್ತೃತ್ವ, ಪಾಂಡಿತ್ಯ, ಪ್ರತಿಭೆ, ವಿವಿಧ ಭಾಷಾ ಸಾಹಿತ್ಯಗಳಲ್ಲಿ ಅವರಿಗಿದ್ದ ಪರಿಣತಿ, ವಿಶ್ವ ಕವಿಗಳ ಉದ್ಧ ಕೃತಿಗಳ ವಿಷಯ ದಲ್ಲಿ ಅವರಿಗಿದ್ದ ತಲಸ್ಪರ್ಶಿಯೂ ತೋಲನಾತ್ಮಕವೂ ರಸಾರ್ದ್ರವೂ ಆದ ವ್ಯಾಖ್ಯಾನ ವೈಖರಿ—ಇವು ಶ್ರೀಯವರನ್ನು ಬಿಟ್ಟರೆ ಬೇರೆ ಯಾರಲ್ಲಿ ಕಾಣ ಬರುತ್ತದೆ ?

ವೇದಿಕೆಯ ಮೇಲೆ ನಿಂತರೆ ತೋರಿಬರುತ್ತಿದ್ದ ಆ ಧೀರ ಗಂಭೀರವಾದ ನಿಲುವು ಬೇರೆ ಯಾರಲ್ಲಿ ತೋರಿಬರುತ್ತಿತ್ತು ? ಆ ದುಂಡನೆಯ ಮುದ್ದು ಮುಖ, ಆ ಅರ್ಥಗರ್ಭಿತವಾದ ನೋಟವನ್ನು ಬೀರುತ್ತಿದ್ದ ಹೊಳೆಹೊಳೆಯುವ ಆ ಕಣ್ಣುಗಳು, ಆ ಸುರುಳಿ ಸುರುಳಿಯಾಗಿ ಉರುಳುರುಳಿ ಬರುತ್ತಿದ್ದ ಸಿರಿಗನ್ನಡ ನುಡಿಗಳ ಇಂಪಿನ ಅಲಂಪು ಇವು ಅನ್ಯರಲ್ಲಿ ಕಾಣುವುದುಂಟೆ ? ಸ್ಪಷ್ಟವಾದ ಉಚ್ಚಾರ, ಅಸ್ಖಲಿತವಾದ ಮಾತುಗಾರಿಕೆ, ನಿರ್ದುಷ್ಟವಾದ ಅಭಿಪ್ರಾಯ ಪ್ರತಿಪಾದನೆ ಆ ರಸಾವೇಶ, ಆ ತಾದಾತ್ಮ್ಯ, ಮೂಲೆ ಮೂಲೆಯಾಗಿ, ಮಲೆ ಮಲೆಯಾಗಿ ಕಟ್ಟಿಕೊಂಡು ಹೋಗುತ್ತಿದ್ದ ಆ ಮಾತಿನ ಮಂಟಪ ಈ ಮುಂತಾದ ಗುಣಸಮುಚ್ಚಯ ಬೇರೆ ಎಲ್ಲಿ ತೋರಿಬರುತ್ತಿತ್ತು. ಪ್ರಾಕ್ಕ್ರ್ಯಾವ್ಯಗಳಿಂದ ಉದಾ ಹರಣೆಗಳನ್ನು ತುಂಬಿ ತುಂಬಿ ಉಪನ್ಯಾಸವನ್ನು ರಂಜಪ್ರೌಢವೂ ರಸಿಕಜನ ರಂಜನೀಯವೂ ಆಗುವಂತೆ ಮಾಡಿಕೊಂಡು ಹೋಗುತ್ತಿದ್ದ ಆ ಮೋಹಕ ಕಲಾಕೌಶಲ ಇವುಗಳನ್ನೆಲ್ಲ ನಾವು ಮರೆತೂ ಇಲ್ಲ, ಮರೆಯುವುದು ಸಾಧ್ಯವೂ ಇಲ್ಲ.

ಪಾಠ ಪ್ರವಚನಗಳ ತರಗತಿಗಳಲ್ಲಿ ಶ್ರೀಯವರು ಪಾಠ ಹೇಳಿಕೊಡುತ್ತಿದ್ದ ರೀತಿಯೇ ಬೇರೆ. ಕಾವ್ಯವೋ ವ್ಯಾಕರಣವೋ ಛಂದಸ್ಸೋ ಸಾಹಿತ್ಯ ಚರಿತ್ರೆಯೋ ವಿಷಯ ಯಾವುದೇ ಇದ್ದರೂ ಅದರ ಉದ್ದ ಅಗಲ ಆಳಗಳನ್ನೆಲ್ಲ ವಿದ್ಯಾರ್ಥಿ ವೃಂದಕ್ಕೆ ಸ್ಪಷ್ಟವಾಗಿ ಸರ್ವಂಕಷವಾಗಿ ಪರಿಚಯಿಸಿಕೊಟ್ಟು ಜ್ಞಾನದ ದಿಗಂತಗಳ ಸಾನ್ನಿಧ್ಯಮಹಿಮೆಯಿಂದ ನಮ್ಮನ್ನು ಪುನೀತರನ್ನಾಗಿ ಮಾಡುವ ಆಚಾರ್ಯಕಲೆ ಅವರದಾಗಿತ್ತು. ಪರೀಕ್ಷೆಯ ದೃಷ್ಟಿಯಿಂದ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಹಳಸಲು ಕಸುಬುಗಾರಿಕೆಗೂ ಶ್ರೀಯವರಿಗೂ ಎಷ್ಟೋ ಕಿಲೋಮೀಟರುಗಳ ದೂರ, ವಿಚಾರದಲ್ಲಿ ಮಥನಕ್ಕೆ ಅವಕಾಶವಿರಬೇಕು, ವಿಷಯದಲ್ಲಿ ಆಸಕ್ತಿ ಮೂಡಬೇಕು ಎಂದು ಬಯಸಿ ಬಂದ ವಿದ್ಯಾರ್ಥಿಗಳಿಗೆ ಅಮೃತೋಪಮವಾದ ಗ್ರಾಸ ಇವರಲ್ಲಿ ದೊರೆಯುತ್ತಿತ್ತು.

ಇನ್ನು ಇವರ ಕಾರ್ಯಕ್ಷೇತ್ರಗಳ ವಿಷಯವಾಗಿ ಎರಡು ಮಾತು ಬರೆಯಬೇಕು. ವಯಸ್ಕರ ಶಿಕ್ಷಣದಿಂದ ಸ್ನಾತಕೋತ್ತರ ಶಿಕ್ಷಣದವರೆಗೆ ಇವರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಇದರ ಮೇಲೆ ಪರಿಷತ್ತಿಗೆ ಸಂಬಂಧಿಸಿದಂತೆ ಇವರು ಹಮ್ಮಿಕೊಂಡ ಯೋಜನೆಗಳು ಹಲವು. 'ಕನ್ನಡ ಬಾವುಟದ ಕಲ್ಪನೆ ಅದೇ ಹೆಸರಿನ ಒಂದು ಹಾಡು ಅದೇ ಹೆಸರಿನ—ಕನ್ನಡದ ಹಿರಿಮೆಗಳನ್ನು ಸಾರುವಂತಹ ಅರ್ವಾಚೀನರ ಮತ್ತು ಆಪ್ರಾಚೀನರ ಕಾವ್ಯಭಾಗಗಳಿಂದ ಆಯ್ದ—ಒಂದು ಸಂಕಲನ ಗ್ರಂಥ 'ಕನ್ನಡ ನುಡಿ' ಪತ್ರಿಕೆಯ ಪ್ರಕಟಣೆ, ಇಂಗ್ಲೀಷ್-ಕನ್ನಡ ನಿಘಂಟು, ಕನ್ನಡ ಕಾವಜಾಣರತ್ನ ಪರೀಕ್ಷೆಗಳ ಏರ್ಪಾಟು ಮುಂತಾದವುಗಳನ್ನು ಯೋಚಿಸಿ ಯೋಚಿಸಿ ಕನ್ನಡ ನಾಡು ನುಡಿಗಳ ಏಳಿಗೆಗೆ ವಿಶೇಷವಾಗಿ ದುಡಿದ ಮಹಾನುಭಾವರು ಶ್ರೀಯರು. 'ಸಿರಿಗನ್ನಡಂಗೆಲ್ಗೆ' 'ಕನ್ನಡತಾಯ್ ಬಾಳ್ಗೆ' ಎಂಬ ಬೀಜತಂತ್ರಗಳನ್ನು ಶ್ರೀಸಾಮಾನ್ಯರಿಗೆ ಉಪದೇಶಿಸಿ ಎಲ್ಲರನ್ನೂ ಕನ್ನಡ ರಾಜರಾಜೇಶ್ವರಿಯ ತೇರೆಳೆಯುವುದಕ್ಕೆ ಕರೆಗೊಟ್ಟ ದ್ರಷ್ಟಾರರು ಇವರು. ಪಾಠ ಪ್ರವಚನಗಳಲ್ಲಿ, ಸಲ್ಲಾಪ ಸಂವಾದಗಳಲ್ಲಿ ಭಾಷಣ ಲೇಖನಗಳಲ್ಲಿ ಕನ್ನಡದ ಹಿಂದಿನ ವೈಭವ, ಇಂದಿನ ಅವನತಿ, ನಾಳಿನ ನವೋದಯಗಳನ್ನು ಕುರಿತೇ ಆಡಿ ಆಡಿ ನಾಡಿನ ಉದ್ದಗಲಗಳನ್ನು ಮೆಟ್ಟಿಬಂದವರು ಇವರು.

ರಾಜ-ಪ್ರಜೆಗಳಿಬ್ಬರ ಗೌರವಾದರಗಳಿಗೂ ಪಾತ್ರರಾಗಿರುತ್ತ ಹೃತ್ಪೂರ್ವಕವಾಗಿ ಕನ್ನಡದ ಏಳಿಗೆಯ ಕಾಯಕವನ್ನು ಶ್ರದ್ಧಾಭಕ್ತಿಗಳಿಂದ ಕೈಗೊಂಡು ತಾವು ಕಂಡ ಬಂಗಾರದ ಕನಸುಗಳೆಲ್ಲ ತಮ್ಮ ಜೀವನ ಕಾಲದಲ್ಲಿಯೇ

ಒಂದೊಂದಾಗಿ ನನಸಾಗುತ್ತ ಬರುತ್ತಿದ್ದುದನ್ನು ನೋಡಿ ತುಷ್ಟರಾಗಿ ಹೃಷ್ಟರಾಗಿ ಅಮರರಾಗಿ ಹೋದವರು ಶ್ರೀಯವರು. ನಾಡುನುಡಿಗಳ ನವೋದಯವಾದ ಬೃಹದ್ಗಾಥೆಗೆ ಶ್ರೀಕಾರ ಬರೆದ ಈ ಮಹನೀಯರಿಂದ ತಾನೆ ನಮ್ಮಂಥವರು ಆಕಾರಗೊಂಡದ್ದು ; ನಮ್ಮ ಬದುಕು ಶ್ರೀಮಯವಾದದ್ದು !!

ಎಸ್. ವಿ. ಪರಮೇಶ್ವರಭಟ್ಟ



ಬಹುಸಂಖ್ಯಾತ ಜನತೆಯನ್ನು ದಂಡಬಲದಿಂದ ನಿಯಂತ್ರಿಸುವುದು ಅಸಾಧ್ಯವಾದ ಕೆಲಸವಾಗಿರುವುದು.

—ಎಡ್ಮಂಡ್ ಬರ್ಕ್

ಅಧಿಕಾರವು ಮುಟ್ಟಿದ್ದನ್ನೆಲ್ಲ ಸಾಂಕ್ರಾಮಿಕ ರೋಗದಂತೆ ಕಲುಷಿತಗೊಳಿಸುತ್ತದೆ.

—ಷೆಲ್ಲಿ

ಶರೀರದಂತೆ ಬುದ್ಧಿಗೂ ಮುಪ್ಪಿರುವುದರಿಂದ ನಿರ್ಣಾಯಕ ಸ್ಥಾನಗಳಲ್ಲಿ ಇರುವವರು ಆಜೀವ ಪರ್ಯಂತ ಅಧಿಕಾರದಲ್ಲಿರಬಾರದು.

—ಅರಿಸ್ಟಾಟಲ್

ಅನ್ಯಾಯ ಮಾಡುವುದು, ಅನ್ಯಾಯವನ್ನು ಅನುಭವಿಸುವುದಕ್ಕಿಂತ ಹೀನಕರವಾದುದು.

—ಪ್ಲೇಟೋ

# ಕೆಲವು ನೆನಪುಗಳು

ಆಚಾರ್ಯ ಬಿ.ಎಂ.ಶ್ರೀಯವರು ನನಗೆ ಪರಿಚಯವಾದುದು ಸುಮಾರು ಅರವತ್ತು ವರ್ಷಗಳ ಹಿಂದೆ. ಅಂದಿನಿಂದ ಅವರು ಸ್ವರ್ಗಸ್ಥರಾಗುವವರೆಗೆ ಅವರ ನಿಕಟವರ್ತಿಯಾಗಿದ್ದ ಅವರ ಆಪ್ತಶಿಷ್ಯರಲ್ಲಿ ನಾನೂ ಒಬ್ಬನೆಂದು ತಿಳಿಸುವುದು ನನಗೆ ಹೆಮ್ಮೆಯ ವಿಷಯ. ಆದುದರಿಂದ ಅವರ ನನ್ನ ಸಂಬಂಧವಾದ ಕೆಲವು ಸ್ವಾರಸ್ಯವಾದ ಘಟನೆಗಳನ್ನು ನಿರೂಪಿಸುವುದು ನನಗೆ ಸಂತೋಷದ ವಿಷಯ.

ನಾನು ೧೯೨೪ರಲ್ಲಿ ಮಹಾರಾಜ ಕಾಲೇಜಿನಲ್ಲಿ ಪ್ರಥಮ ವರ್ಷದ ಬಿ.ಎ. ತರಗತಿಯ ವಿದ್ಯಾರ್ಥಿಯಾಗಿ ಸೇರಿದೆ. ಆಗ ಆಚಾರ್ಯ ಶ್ರೀಯವರು ನನಗೆ ಇಂಗ್ಲಿಷ್ ಉಪಾಧ್ಯಾಯರಾಗಿದ್ದರು. ಆಗ ಆ ಕಾಲೇಜಿನಲ್ಲಿ ಒಂದು ಕರ್ಣಾಟಕ ಸಂಘವಿತ್ತು. ಅದಕ್ಕೆ ಶ್ರೀಯವರು ಅಧ್ಯಕ್ಷರು. ಕನ್ನಡದ ಉಪ ಪ್ರಾಧ್ಯಾಪಕರಾಗಿದ್ದ ಬಿ. ಕೃಷ್ಣಪ್ಪನವರು ಉಪಾಧ್ಯಕ್ಷರು. ಇವರಿಬ್ಬರೂ ಶಿಸ್ತಿಗೂ ಕರ್ತವ್ಯನಿಷ್ಠೆಗೂ ಹೆಸರುವಾಸಿಯಾಗಿದ್ದರು. ಕರ್ಣಾಟಕ ಸಂಘದಲ್ಲಿ ಪ್ರತಿತಿಂಗಳಿನ ೨ನೆಯ ಶನಿವಾರ ಕಾರ್ಯಕ್ರಮವಿರುತ್ತಿತ್ತು. ಸದಸ್ಯಸಂಖ್ಯೆ ೫೦–೬೦ ಮಾತ್ರ ಇರುತ್ತಿತ್ತು. ಆದರೂ ವರ್ಷದ ಕಾರ್ಯಕ್ರಮಗಳೆಲ್ಲ ವರ್ಷ ದಾದಿಯಲ್ಲಿಯೇ ನಿಷ್ಕರ್ಷೆಯಾಗಿ ಅದು ಮುದ್ರಿತವಾಗಿ ಅದರಂತೆ ಕ್ಲಿಪ್ತಕಾಲ ಗಳಲ್ಲಿ ತಪ್ಪದೆ ವರ್ಷದುದ್ದಕ್ಕೂ ನಡೆಯುತ್ತಿತ್ತು. ಆ ವರ್ಷ ನಾನು ಕರ್ಣಾಟಕ ಸಂಘದ ಕಾರ್ಯದರ್ಶಿಯಾಗಿ ಚುನಾಯಿತನಾಗಿ ಮೂರು ವರ್ಷಕಾಲ ಏಕ ಪ್ರಕಾರವಾಗಿ ಆ ಸ್ಥಾನದಲ್ಲಿದ್ದೆ. ಹಿಂದಿನ ವರ್ಷದಲ್ಲಿ ತೀ.ನಂ.ಶ್ರೀಯವರು ಕಾರ್ಯದರ್ಶಿಗಳಾಗಿದ್ದರು. ಆ ವರ್ಷ ಸಂಘದ ಪ್ರಾರಂಭ ಭಾಷಣವಾಗ ಬೇಕಾಗಿತ್ತು. ಅದನ್ನು ಸಂಘದ ಅಧ್ಯಕ್ಷರೇ ಮಾಡುವ ಸಂಪ್ರದಾಯ. ಅದರಂತೆ ಬಿ. ಎಂ. ಶ್ರೀಯವರೇ ಮಾಡಬೇಕಾಯಿತು. ಅವರು ಆ ವೇಳೆಗೆ ಉಚ್ಚ ಕನ್ನಡ ವಿದ್ವಾಂಸರಾಗಿದ್ದೂ ಕನ್ನಡದಲ್ಲಿ ಪಾಠಪ್ರವಚನಗಳನ್ನು ನಡೆಸುತ್ತಿದ್ದರೂ ಕನ್ನಡ ದಲ್ಲಿ ಮಾತನಾಡುವ ಅಭ್ಯಾಸವಿರಲಿಲ್ಲ. ಅವರಿಗೆ ಕನ್ನಡದಷ್ಟೇ ಇಂಗ್ಲಿಷಿ ನಲ್ಲಿಯೂ ಅಭಿಮಾನ. ಕರ್ಣಾಟಕ ಸಂಘದಲ್ಲಿಯೂ ಇಂಗ್ಲಿಷ್‌ನಲ್ಲಿಯೇ ಮಾತ ನಾಡುತ್ತಿದ್ದರು. ಆಗ ಕನ್ನಡ ವಿಷಯಕವಾದ ಅಭಿಮಾನ ತಲೆದೋರುವುದಕ್ಕೆ ಪ್ರಾರಂಭವಾಗುತ್ತಿದ್ದ ಕಾಲ. ಆ ವರ್ಷದ ಪ್ರಾರಂಭ ಭಾಷಣವನ್ನು ಕನ್ನಡ ದಲ್ಲಿಯೇ ಮಾಡಿಸಬೇಕೆಂದು ನಾನೂ ತೀ.ನಂ. ಶ್ರೀ. ಯವರೂ ಒಂದು ಸಂಚು ಮಾಡಿಕೊಂಡೆವು. ಬಿ. ಎಂ. ಶ್ರೀಯವರಿಗೆ ಮೊದಲೇ ತಿಳಿಸಿದರೆ ಒಪ್ಪುತ್ತಾರೆಯೋ

ಇಲ್ಲವೋ ಎಂಬ ಸಂದೇಹ. ಸಕಾಲದಲ್ಲಿ ಸೂಚಿಸಿದರೆ ನಿರ್ಬಂಧದಿಂದ ಮಾಡಿಯೇ ಮಾಡುತ್ತಾರೆಂಬವೊಂದು ಧೈರ್ಯ. ಆ ಸೂಚನೆ ಮಾಡಲು ನಿರ್ಧರಿಸಿಬಿಟ್ಟೆವು. ತೀ.ನಂ.ಶ್ರೀ.ಯವರಿಗೆ ಆಚಾರ್ಯರ ವಿಷಯ ಒಂದು ವರ್ಷದಿಂದ ಪರಿಚಿತವಾಗಿತ್ತು. ಅವರು ಶೀಘ್ರಕೋಪಿಗಳು ಎಂಬ ಭಾವನೆಯಿಂದ ತಾವು ಸೂಚಿಸಲು ಹಿಂಜರಿದರು. ನನಗೆ ಹೊಸದಾದುದರಿಂದ ನಾನೇ ಆ ಕೆಲಸ ಮಾಡಲು ಒಪ್ಪಿಕೊಂಡೆ. ಪ್ರಾರಂಭ ಭಾಷಣದ ದಿನ ಆಚಾರ್ಯರು ಭಾಷಣ ಮಾಡಲು ಎದ್ದು 'Gentlemen' ಎಂದಾಗ ನಾನು ಎದ್ದು ಬಹು ನಮ್ರತೆಯಿಂದ ಅಧ್ಯಕ್ಷರಲ್ಲಿ ವಿನಯಪೂರ್ವಕ ವಿಜ್ಞಾಪನೆ. ಕರ್ಣಾಟಕ ಸಂಘದ ಕಾರ್ಯಕಲಾಪಗಳನ್ನು 'ಕನ್ನಡ ಭಾಷೆಯಲ್ಲಿಯೇ ಮಾಡುವುದು ಮೇಲಲ್ಲವೆ'? ಎಂದುಬಿಟ್ಟೆ. ಪೂರ್ವಸೂಚನೆಯಿಲ್ಲದೆ ಮಾಡಿದ ಈ ಸೂಚನೆಯಿಂದ ಅಧ್ಯಕ್ಷರಿಗೆ ಕಸಿವಿಸಿಯಾಯಿತು. ಮುಖ ಕೆಂಪಗಾಯಿತು. ನನ್ನ ಮುಖವನ್ನು ದುರುಗುಟ್ಟಿ ನೋಡಿದರು. ಅನಿವಾರ್ಯವಾಗಿ ಕನ್ನಡದಲ್ಲಿಯೇ ಪ್ರಾರಂಭಿಸಿದರು. ಇಂಗ್ಲಿಷಿನ ಶೈಲಿಯಲ್ಲಿ ಯೋಚಿಸಿ ಕನ್ನಡದಲ್ಲಿ ಭಾಷಾಂತರಿಸುವಂತಿತ್ತು ವಾಕ್ಯಸರಣಿ. ಒಂದೊಂದುಸಲ ಸರಿಯಾದ ಕನ್ನಡಶಬ್ದ ಸಿಗದಿದ್ದಾಗ ನನ್ನ ಕಡೆ ನೋಡಿ ಕಣ್ಣುಬಿಡುವುದು. ನನಗೂ ಗಾಬರಿಯಾಯಿತು. ಅವರಿಂದ ಕಾರ್ಯಾಂತದಲ್ಲಿ ನನಗೆ ಭರ್ತ್ಸನೆಯಾಗುತ್ತದೆಂಬ ಭಯ ನಿರ್ಧಾರವಾಯಿತು. ನಾನು ಕೊನೆಯಲ್ಲಿ ವಂದನಾರ್ಪಣೆ ಮಾಡಬೇಕಾಗಿತ್ತು. ಅಂದು ಶ್ರೀಯವರನ್ನು ಕಾಣದೆ ಪುನಃ ಪ್ರತ್ಯೇಕವಾಗಿ ಅವರ ಕ್ಷಮೆ ಕೇಳಿ ಆ ಮೇಲೆ ಪುನಃ ನೋಡುವುದು ಒಳ್ಳೆಯದೆಂದು ತೋರಿತು. ತೀ.ನಂ.ಶ್ರೀ.ಯವರನ್ನು ನನ್ನ ಪರವಾಗಿ ವಂದನಾರ್ಪಣೆ ಮಾಡುವಂತೆ ಕೇಳಿಕೊಂಡು ಅನಿವಾರ್ಯ ಕಾರ್ಯವಿರುವುದರಿಂದ ಸಭೆಯನ್ನು ಬಿಟ್ಟುಹೋಗಲು ಅವಕಾಶ ಕೊಡಬೇಕೆಂದು ಅಧ್ಯಕ್ಷರಿಗೆ ಚೀಟಿ ಬರೆದು ಕಳುಹಿಸಿ ಮಧ್ಯೆ ಎದ್ದು ಹೊರಟುಹೋದೆ. ಇದು ನಡೆದುದು ಶನಿವಾರದ ದಿನ. ಮುಂದಿನ ಬುಧವಾರ ಮೊದಲನೆಯ ಗಂಟೆ ಅವರ 'ಜೂಲಿಯಸ್ ಸೀಸರ್'ನ ಪಾಠವಿತ್ತು. ಆ ದಿನ ತರಗತಿಯಲ್ಲಿಯೇ ಚೆನ್ನಾಗಿ ತಟ್ಟುತ್ತಾರೆಂದು ನಡುಕ. ಅದಕ್ಕಾಗಿ ಮೊದಲೇ ಅವರಲ್ಲಿ ಕ್ಷಮಾಪಣೆಯನ್ನು ಕೇಳಲು ಹತ್ತೂವರೆ ಗಂಟೆಗೇ ಅವರ ಕೊಠಡಿಯ ಮುಂದೆ ಹೋಗಿ ಕಾದೆ. ಆಚಾರ್ಯರು ಬಂದರು. ನನ್ನ ಕಡೆ ನೋಡದೆಯೇ ಒಳಕ್ಕೆ ಹೋಗಿ ಬಾಗಿಲು ಹಾಕಿಕೊಂಡರು. ಸ್ವಲ್ಪಹೊತ್ತು ಕಾದು ಭಂಡ ಧೈರ್ಯದಿಂದ ಬಾಗಿಲು ತೆಗೆದುಕೊಂಡು ಅವರ ಎದುರಿಗೆ ಹೋಗಿ ನಿಂತುಕೊಂಡೆ. ಮಾತ

ನಡಿಸಲೇ ಇಲ್ಲ. ನಾನೇ 'ತಿಳಿಯದೆ ಮಾಡಿಬಿಟ್ಟೆ ಸಾರ್ ಕ್ಷಮಿಸಬೇಕು', ಎಂದೆ. ಕೋಪ ಉಲ್ಬಣವಾಯಿತು. 'ಏನ್ರಿ ತಿಳಿಯಲಿಲ್ಲ ? ಗಾಂಭೀರ್ಯ ಬೇಡವೇ, ಮೊದಲೇ ಸೂಚಿಸಬಾರದೇ ? ಎಲ್ಲ ಗೊತ್ತು ಇದೆಲ್ಲ ಚೇಷ್ಟೆ. ಕನ್ನಡದ ಅಭಿಮಾನ ಪ್ರಕಾಶನ' ಎಂದು ಹೇಳಿ ಸ್ವಲ್ಪ ಹೊತ್ತಾದ ಮೇಲೆ ಹೀಗೆ ಮುಖ ಭಂಗಮಾಡಬಾರದು ಎಂದು ಬುದ್ಧಿವಾದ ಹೇಳಿ ಕಳುಹಿಸಿದರು. ಮುಂದೆಲ್ಲ ಬೇರೆ ಕಡೆಗಳಲ್ಲಿ ಬಹುಪ್ರೋಗಸಾಗಿ ಮಾತನಾಡತೊಡಗಿದರು.

೧೯೩೮ರಲ್ಲಿ ಕಲ್ಬುರ್ಗಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ'ವೆಂಬ ಅಭಿದಾನದಿಂದ ಅದ್ಭುತ ವಾದ ಭಾಷಣ ಮಾಡಿದರು. ಅವರೊಂದಿಗೆ ಅವರ ಶಿಷ್ಯರಾದ ನಾವು ಕೆಲವರು ಹೋಗಿದ್ದೆವು. ಆ ಭಾಷಣದಿಂದ ಮುಗ್ಧರಾದ ನಾವು ಅವರ ಭಾಷಣವಾದ ಮೇಲೆ ಅವರನ್ನು ಸಂಧಿಸಿ ಭಾಷಣವು ಅಮೋಘವಾಗಿತ್ತು ಎಂದು ತಿಳಿಸಿದಾಗ ಅವರಿಗಾದ ಸಂತೋಷ ಅವರ್ಣನೀಯ. ನಿಜವಾಗಿ ಚೆನ್ನಾಗಿತ್ತೇ ಎಂದು ಪ್ರಶ್ನೆ ಮಾಡಿದರು. ನಾನು ಮಾತ್ರ ಅವರಿಗೆ ಕರ್ಣಾಟಕ ಸಂಘದ ಆರಂಭ ಭಾಷಣದ ನೆನಪು ಮಾಡಿದೆ. ಅವರು ನಕ್ಕು ಅಭ್ಯಾಸಬಲದಿಂದ ಎಲ್ಲವೂ ಸುಪುಷ್ಟವಾಗುತ್ತದೆ ಎಂದುಬಿಟ್ಟರು.

ಅದೇ ಸಮ್ಮೇಳನದಲ್ಲಿ ಹೋಗಿದ್ದ ನಾವು ಅಲ್ಲಿ 'ಗದಾಯುದ್ಧ ನಾಟಕ' ಮತ್ತು 'ಯಮುನ ಸೋಲು' ನಾಟಕಗಳನ್ನು ಅಭಿನಯಿಸಿದೆವು. ಅಲ್ಲಿಗೆ ಬಂದಿದ್ದ ಬಿಜಾಪುರದ ಜಿಲ್ಲಾಧಿಕಾರಿಗಳಾದ ಬಿ.ಎಸ್. ನಾಯಕ್ ಎಂಬುವರು ಅದರಿಂದ ಆಕರ್ಷಿತರಾಗಿ ಅದನ್ನು ಬಿಜಾಪುರದಲ್ಲಿಯೂ ಪ್ರದರ್ಶಿಸಬೇಕೆಂದು ಒತ್ತಾಯಪಡಿಸಿದರು. ಆ ನಾಟಕದಲ್ಲಿ ಭೀಮನ ಪಾತ್ರವನ್ನು ಶ್ರೀ ಎ. ಎಸ್. ನಾರಾಯಣಶಾಸ್ತ್ರಿಗಳೂ ದುರ್ಯೋಧನನ ಪಾತ್ರವನ್ನು ಶ್ರೀ ಟಿ. ಎಂ. ಅಮಿನಾರ್ರರೂ ವಹಿಸಿದ್ದರು. ನಾನು ಧೃತರಾಷ್ಟ್ರನ ಪಾತ್ರವನ್ನು ವಹಿಸಿದ್ದೆ. ಅಮಿನಾರ್ರರು ಅನಿವಾರ್ಯವಾಗಿ ಬಿಜಾಪುರಕ್ಕೆ ಬರಲಾಗಲಿಲ್ಲ. ನಾಟಕವನ್ನು ಆಡಲೇಬೇಕೆಂದು ನಿಷ್ಕರ್ಷೆಯಾಯಿತು. ಆಗ ಬಿ.ಎಂ.ಶ್ರೀ.ಯವರು ನನ್ನನ್ನು ದುರ್ಯೋಧನನ ಪಾತ್ರವಹಿಸಲು ಪ್ರೋತ್ಸಾಹಿಸಿದರು. ಕಾಲವಿದ್ದುದು ಮೂರೇ ದಿನ. ಆದರೂ ಆಚಾರ್ಯರ ಉತ್ತೇಜನದಿಂದ ನಾಟಕವು ಯಶಸ್ವಿಯಾಗಿ ನಡೆಯಿತು. ಶ್ರೀಯವರಿಗೆ ಬಹುಸಂತೋಷವಾಯಿತು. ಬಿಜಾಪುರದ ಪ್ರೇಕ್ಷಕ ವರ್ಗವೂ ವಿಶೇಷ ಆನಂದಪಟ್ಟಿತು.

ಆಚಾರ್ಯರಿಗೆ ತಮ್ಮ ಆಚಾರ್ಯದಲ್ಲಿ ಅತ್ಯಂತ ಭಕ್ತಿ. ಅವರು ಅದನ್ನು

ಪ್ರದರ್ಶಿಸಿದ ಸಂದರ್ಭವು ಬಹು ಆಕರ್ಷಕವಾಗಿದೆ. ಮಹಾರಾಜರವರ ಕಾಲೇಜಿನಲ್ಲಿ ಕಾನಕಾನಹಳ್ಳಿ ವರದಾಚಾರ್ಯರೆಂಬ ಒಬ್ಬ ಕನ್ನಡ ಪಂಡಿತ ರಿದ್ದರು. ಆಗಿನ ಕಾಲದಲ್ಲಿ ಭಾಷಾಪಂಡಿತರುಗಳನ್ನು ಮುನ್ಷಿಯೆಂದು ಕರೆಯು ತ್ತಿದ್ದರು. ಆಗ ಅವರಿಗೆ ವಿಶೇಷ ಸ್ಥಾನಮಾನಗಳಿರಲಿಲ್ಲ. ಅವರು ತರಗತಿಗಳಲ್ಲಿ ವಿದ್ಯಾರ್ಥಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೂ ಬಹು ಕಷ್ಟವಾಗಿತ್ತು. ವಿದ್ಯಾರ್ಥಿಗಳೂ ಅವರ ಪಾಠಗಳಿಗೆ ವಿಶೇಷ ಗಮನಿಸುತ್ತಿರಲಿಲ್ಲ. ವರದಾ ಚಾರ್ಯರ ವಿಷಯುವೇ ಬೇರೆ. ಅವರ ಪಾಂಡಿತ್ಯ ಅನ್ಯಾದೃಶವಾಗಿತ್ತು. ಅವರ ತರಗತಿಯು ಬಹು ನಿಶ್ಯಬ್ದವಾಗಿರುತ್ತಿತ್ತು. ಅವರು ಹಳಗನ್ನಡ ಪದ್ಯಗಳನ್ನು ಬಹು ಸುಶ್ರಾವ್ಯವಾಗಿ ಹಾಡಿ ಪಾಠ ಪ್ರವಚನ ಮಾಡುತ್ತಿದ್ದರು. ಅವರ ಬುದ್ಧಿ ಬಹು ಚುರುಕು. ಪಾಠ ಹೇಳುವುದಕ್ಕೆ ಅವರು ಎಂದೂ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುತ್ತಿರಲಿಲ್ಲ. ಅವರು ಆಚಾರ್ಯ ಶ್ರೀಕಂಠಯ್ಯನವರಿಗೂ ಆಗಿನ ಕಾಲೇಜಿನ ಪ್ರಾಂಶುಪಾಲರಾಗಿದ್ದ ಎ್. ಎಸ್. ಸುಬ್ಬರಾಯರಿಗೂ ಕನ್ನಡದ ಗುರುಗಳಾಗಿದ್ದರು. ಅವರು ನಿಯಮಾನುಸಾರವಾಗಿ ವಿಶ್ರಾಂತರಾದ ಮೇಲೆ ಒಂಬತ್ತು ವರ್ಷಗಳ ಸೇವಾ ವಿಸ್ತರಣವನ್ನನುಭವಿಸಿ ೧೯೩೬ರಲ್ಲಿ ವಿಶ್ರಾಂತಿ ಯನ್ನು ಪಡೆದರು. ಅವರ ಬುದ್ಧಿಶಕ್ತಿ, ಬೋಧನ ವೈಭವ, ಗಾನವಿಲಾಸ ವಿಮರ್ಶನ ಚಾತುರ್ಯ, ಶಿಲಾಶಾಸ್ತ್ರದಲ್ಲಿದ್ದ ಅವರ ವೈದಗ್ಧ್ಯ ಇವುಗಳಿಂದ ಆಕರ್ಷಿತರಾಗಿದ್ದ ಶ್ರೀಯುವರು ಅವರಲ್ಲಿ ವಿಶೇಷ ಗೌರವವನ್ನಿಟ್ಟುಕೊಂಡಿದ್ದರು. ಕಾಲೇಜಿನ ಕರ್ಣಾಟಕ ಸಂಘವು ಅವರಿಗೆ ಸನ್ಮಾನವನ್ನೇರ್ಪಡಿಸಿತು. ಆಗ ಶ್ರೀಯುವರು ಪ್ರದರ್ಶಿಸಿದ ಉತ್ಸಾಹ ಆದರ್ಶನೀಯುವಾಗಿದೆ. ತಾವೇ ಹೋಗಿ ಅವರಿಗೆ ಅರ್ಪಿಸಬೇಕಾದ ಶಾಲುಗಳನ್ನು ಬೆಲೆಗೆ ತಂದು ತಾವು ಆಗತಾನೇ ಕೊಂಡುಕೊಂಡಿದ್ದ 'ಮಾರಿಸ್‌ಕೌಲಿ' ಕಾರಿನಲ್ಲಿ ಅವರ ಮನೆಯಿಂದ ಕರೆದು ಕೊಂಡು ಬಂದು ಮರ್ಯಾದೆ ಮಾಡಿ ಬಾಯಿತುಂಬ ಹೊಗಳಿ ಪುನಃ ತಮ್ಮ ಕಾರಿನಲ್ಲಿಯೇ ಅವರ ಮನೆಗೆ ಕರೆದುಕೊಂಡುಹೋಗಿ ಬಿಟ್ಟರು.

ಕನ್ನಡದ ಅಭಿವೃದ್ಧಿಗಾಗಿ ಅವರು ಕೈಗೊಂಡ ಕಾರ್ಯ ಬಹುಮುಖ ವಾದುದು. ಅದರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ಪೀಠವನ್ನು ಸ್ಥಾಪಿಸಿ ಆ ಶಾಖೆಯಲ್ಲಿ ಸ್ನಾತಕೋತ್ತರ ತರಗತಿಗಳನ್ನು ಪ್ರಾರಂಭಿಸಿದುದು ಪ್ರಧಾನವಾದುದು. ದೇಶದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನಮಾನಗಳು ದೊರಕ ಬೇಕಾದರೆ ಮೈಸೂರಿನ ವಿಶ್ವವಿದ್ಯಾಲಯದಲ್ಲಿ ಅದಕ್ಕೆ ಪ್ರತ್ಯೇಕ ಪೀಠವನ್ನು ಸ್ಥಾಪಿಸುವುದು ಪರಮಾವಶ್ಯಕವೆಂದು ಶ್ರೀಯುವರು ಬಹು ಹಿಂದೆಯೇ

ಮನಗಂಡಿದ್ದರು. ಆದಕ್ಕೆ ಅವರು ೧೯೨೭ರಲ್ಲಿ ವಿಶ್ವವಿದ್ಯಾನಿಲಯದಲ್ಲಿ ರಿಜಿಸ್ಟ್ರಾರ್ ಆಗಿ ನೇಮಕವಾಗುವವರೆಗೆ ಅವಕಾಶವಾಗಲಿಲ್ಲ. ಅವರು ರಿಜಿಸ್ಟ್ರಾರ್‌ರಾಗಿದ್ದಾಗ ಕುಲಪತಿಯಾಗಿದ್ದರು. ಡಾ|| ಬ್ರಿಜೇಂದ್ರನಾಥಶೀಲ ಎಂಬುವರು. ಆತ ಬಹು ಮೇಧಾವಿ. ಆತನಿಗೆ ಮೈಸೂರು ವಿಶ್ವವಿದ್ಯಾನಿಲಯ ವನ್ನು ಭಾರತದ ಪರಮೋತ್ತಮ ಕೇಂದ್ರವನ್ನಾಗಿ ಮಾಡಬೇಕೆಂಬ ಹೆಬ್ಬಯಕೆ ಯಿತ್ತು. ಬಂಗಾಳಿಯಾದ ಆತನಿಗೆ ದೇಶಭಾಷೆಯಲ್ಲಿ ವಿಶೇಷ ಗೌರವವಿತ್ತು. ಶ್ರೀಯವರು ಅವರ ಮೇಲೆ ತಮ್ಮ ಪ್ರಭಾವವನ್ನು ಬೀರಿದರು. ಆದರೂ ಆತನಿಗೆ ಸ್ನಾತಕೋತ್ತರ ತರಗತಿಗಳನ್ನು ತೆರೆದರೆ ಸಾಕಷ್ಟು ವಿದ್ಯಾರ್ಥಿಗಳು ಬರುತ್ತಾರೋ ಇಲ್ಲವೋ ಎಂಬ ಸಂದೇಹ. ಆಗ ಶ್ರೀಯವರು ಆಗ ತಾನೇ ಪದವೀಧರರಾಗಿದ್ದ ನಮ್ಮಗಳನ್ನು ಹುರಿದುಂಬಿಸಿ ಅನೇಕಸಲ ನಮ್ಮಿಂದ ಅರ್ಜಿ ಗಳನ್ನು ಸಲ್ಲಿಸಿ ನಮಗೆ ಕುಲಪತಿಗಳ ಸಂದರ್ಶನಕ್ಕೆ ಏರ್ಪಡಿಸಿ ಕುಲಪತಿಗಳಿಗೆ ನಂಬಿಕೆಯನ್ನುಂಟುಮಾಡಿ ೧೯೨೭ರಲ್ಲಿ ಕನ್ನಡ ಎಂ. ಎ. ತರಗತಿಯನ್ನು ಪ್ರಾರಂಭಿಸಿದರು. ಮೊದಲನೆಯ ವರ್ಷವೇ ಒಂಬತ್ತು ವಿದ್ಯಾರ್ಥಿಗಳು ಆ ವಿಷಯವನ್ನು ಅಭ್ಯಸಿಸಲು ಮುಂದೆ ಬಂದರು. (ಒಂಬತ್ತು ಎಂಬ ಸಂಖ್ಯೆ ಈಗ ಬಹು ದೊಡ್ಡದಾಗಿ ಕಾಣಲಾರದು. ಆಗಿನ ಕಾಲದಲ್ಲಿ ಕಲಾಭಾಗದ ಎಲ್ಲ ಶಾಖೆಯ ಎಂ.ಎ. ವಿದ್ಯಾರ್ಥಿಗಳ ಸಂಖ್ಯೆ ೫ಂಕ್ಕೆ ಮೀರುತ್ತಿರಲಿಲ್ಲ. ಪ್ರಾರಂಭ ವಾದ ಆ ತರಗತಿಗೆ ತಾವೇ ಗೌರವಪ್ರಾಧ್ಯಾಪಕರಾಗಿ ತಮ್ಮ ರಿಜಿಸ್ಟ್ರಾರ್ ಹುದ್ದೆಯಲ್ಲಿ ವಿಶೇಷ ಬಿಡುವಿಲ್ಲದುದರಿಂದ ಆ ತರಗತಿಗಳನ್ನು ವಿಶ್ವವಿದ್ಯಾಲಯದ ಕಾರ್ಯಾಲಯದ ಒಂದು ಕೊಠಡಿಯಲ್ಲಿಯೇ ನಡೆಸಿದರು. ಆ ಶಾಖೆಯಲ್ಲಿ ಪದವೀಧರರಾದ ವಿದ್ಯಾರ್ಥಿಗಳಿಗೆ ಸೂಕ್ತ ಉದ್ಯೋಗಾವಕಾಶವನ್ನು ಕಲ್ಪಿಸಲು ವಿಶೇಷ ಶ್ರಮವಹಿಸಿದರು. ಆ ಸಮಯದಲ್ಲಿ ಅವರು ಸಂಸ್ಕೃತದ್ವೇಷಿ ಎಂಬ ಅಪಪ್ರಥಿಗೂ ಗುರಿಯಾಗಬೇಕಾಯಿತು. ಅವರ ನಿಜವಾದ ನಿಲುವನ್ನು ಅರ್ಥ ಮಾಡಿಕೊಂಡವರನೇಕರು ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಂಡರು.

ಕನ್ನಡದ ಸ್ಥಾನಮಾನಗಳನ್ನು ಹೆಚ್ಚಿಸುವುದಕ್ಕೂ ಕನ್ನಡ ಸಾಹಿತ್ಯದ ಅಭಿವೃದ್ಧಿಗೂ ಅವರು ಮಾಡಿದ ಸಂಘಟನೆಗಳೂ ಸನ್ನಿವೇಶಗಳೂ ಬಹಳ ಸ್ವಾರಸ್ಯಕರವಾಗಿವೆ. ಅದರ ಪ್ರತ್ಯಕ್ಷಾನುಭವವಿರುವವರಿಗೆ ಅವು ಚಿರಪರಿಚಿತ ವಾಗಿವೆ.

ಡಾ|| ಎಸ್. ಅನಂತರಂಗಾಚಾರ್

---

# ಶ್ರೀ ಬಿ. ಎಂ. ಶ್ರೀ ಅವರು
# ವಯಸ್ಕರ ಶಿಕ್ಷಣ ಸಮಿತಿಯ ಪ್ರಥಮಾಧ್ಯಕ್ಷರು

ತಮ್ಮ ಹಿರಿಮೆಯಿಂದ ಸನ್ಮಾನ್ಯ ಬಿ. ಎಂ. ಶ್ರೀಕಂಠಯ್ಯನವರು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಗೆ ಹಿರಿಮೆಯನ್ನೂ ತಂದವರು. ಅವರು ಸಮಿತಿಗೆ ನಾಂದೀ ಸ್ವರೂಪರಾದರು. ಮೊಟ್ಟಮೊದಲಿನ ಅಧ್ಯಕ್ಷರು. ಮೈಸೂರು ಅಕ್ಷರಪ್ರಚಾರ ಸಮಿತಿ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯಾಗಿ ರೂಪುಗೊಂಡಾಗ ಸಮಿತಿಗೊಂದು ಸ್ಫೂರ್ತಿ ತರುವ ಕೆಲಸಗಾರರಲ್ಲಿ ಒಂದು ಹುಮ್ಮಸ್ಸು ಹುಟ್ಟಿಸುವ ಆಸೆ ಆಸಕ್ತಿ ಕೆರಳಿಸುವಂತಹ ಮಹನೀಯರೊಬ್ಬರು ಅಧ್ಯಕ್ಷರಾಗಿರಬೇಕೆಂದು ಯೋಚಿಸಿ ಬಿ. ಎಂ. ಶ್ರೀಯವರನ್ನು ಸಮಿತಿ ಪ್ರಾರ್ಥಿಸಿಕೊಂಡಿತು. ಅವರು ಒಳ್ಳೆಯ ಕೆಲಸ, ನನ್ನ ಸೇವೆಯಿಂದ ಉಪಯೋಗವಾಗುವುದಿದ್ದರೆ ಸಂತೋಷವೆಂದು ಒಪ್ಪಿದರು. ನಿಜವಾಗಿಯೂ ಅವರ ಹೃತ್ಪೂರ್ವಕ ಸೇವೆಯಿಂದ ಸಮಿತಿ ಯಶಸ್ಸು ಹೆಚ್ಚಿತು.

ವಯಸ್ಕರ ಶಿಕ್ಷಣಕ್ಕಾಗಿ ಜಿಲ್ಲಾ ಸಮಿತಿಗಳನ್ನು ರಚಿಸುವಾಗ ಅವರ ಹೆಸರು ಹೇಳಿದರೆ ಸಾಕು, ಅಧಿಕಾರಿಗಳು, ಸಾಹಿತಿಗಳು, ಸಾರ್ವಜನಿಕ ಮುಂದಾಳುಗಳು ತಮ್ಮ ಕೈಂಕರ್ಯವನ್ನು ಅರ್ಪಿಸಲು ಮುಂದೆ ಬರುತ್ತಿದ್ದರು. ಸರಕಾರದ ಆರ್ಥಿಕ ಸಹಾಯ ಕೂಡ ವರ್ಷಕ್ಕೆ ಹನ್ನೆರಡು ಸಾವಿರ ರೂಪಾಯಿ ಇದ್ದದ್ದು ಒಂದು ಲಕ್ಷ ರೂಪಾಯಿಗೇರಿತು. ಹೀಗೆ ವಯಸ್ಕರ ಶಿಕ್ಷಣ ಸಮಿತಿಗೆ ಎಲ್ಲಾ ಕಡೆಯಿಂದಲೂ ಪ್ರೋತ್ಸಾಹ ಪ್ರಾರಂಭವಾದದ್ದು ಬಿ. ಎಂ. ಶ್ರೀಯವರ ಪ್ರಭಾವ.

ಅವರು ಬರೀ ಅಧ್ಯಕ್ಷರಾಗಿರಲಿಲ್ಲ. ವಯಸ್ಕರ ಶಿಕ್ಷಣಕ್ಕೊಂದು ಶಕ್ತಿಯಾಗಿದ್ದರು. ತುಂಬಾ ಆಸಕ್ತಿ ವಹಿಸುತ್ತಿದ್ದರು. ಸಮಿತಿಯ ಸಮಾರಂಭಗಳಲ್ಲಿ ಸಭೆಗಳಲ್ಲಿ ತಪ್ಪದೆ ಭಾಗವಹಿಸಿ ದಿಗ್ದರ್ಶನ ಕೊಡುತ್ತಿದ್ದರು. ಅವರು ಭಾಗವಹಿಸಿದ್ದ ಯಾವ ಸಭೆಯಲ್ಲಾಗಲಿ ಭಾಗವಹಿಸಲು ಸಂತೋಷವಾಗುತ್ತಿತ್ತು. ಅವರ ಮೃದುವಾದ ಸವಿಯಾದ ಪ್ರಭಾವಿತವಾದ ಮಾತು ಕೇಳಲು ಜನ ತುಂಬುತ್ತಿದ್ದರು. ಆ ರಂಗದಲ್ಲಿ ಹುರುಪು ಹೊಳಪು ಹುಟ್ಟುತ್ತಿತ್ತು.

ಬೆಂಗಳೂರಲ್ಲಿ ೧೯೪೩ ಜೂನ್‌ನಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯ ಸೇರ್ಪಡೆಯ ಸಂದರ್ಭವನ್ನು ಉಪಯೋಗಿಸಿಕೊಂಡು ಸಮಿತಿ ವಯಸ್ಕರ ಶಿಕ್ಷಣ

---

ಈ ಲೇಖನದಲ್ಲಿ ಉಪಯೋಗಿಸಿರುವ ಉದ್ಧರಣ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ 'ಶ್ರೀ ಸಾಹಿತ್ಯ'ದಿಂದ.

ಸಮ್ಮೇಳನವನ್ನು ಕರೆಯಿತು. ಅದೇ ಸಮಿತಿಯ ಮೊದಲನೆ ಸಮ್ಮೇಳನವಾಗಿತ್ತು. ಆ ಸಮ್ಮೇಳನವನ್ನು ಸಂಸ್ಥಾನದ ದಿವಾನ್ ಮಾಧವರಾವ್ ಅವರು ಉದ್ಘಾಟಿಸಿದರು. ಸಮಿತಿಯ ಕಾರ್ಯದಲ್ಲಿ ತುಂಬಾ ಆಸಕ್ತಿ ಕೋರಿ ಸಹಾಯ ಮಾಡುತ್ತಿದ್ದ ವಿದ್ಯಾಮಂತ್ರಿ ಇಮಾಮ್‌ರವರು ಪ್ರೋತ್ಸಾಹ ಭಾಷಣ ಮಾಡಿದರು. ಆ ಸಮ್ಮೇಳನದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರೂ ನೆರೆದಿದ್ದರು. ಆ ಸಂದರ್ಭದಲ್ಲಿ ಸಮಿತಿಯ ಅಧ್ಯಕ್ಷರಾದ ಬಿ. ಎಂ. ಶ್ರೀಯವರು ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣದಲ್ಲಿ ಹೇಳಿದರು, "ವಿದ್ಯೆ ಇಲ್ಲದವನು ಪಶುವೆಂತಲೂ ವಿದ್ಯೆಯಿಂದ ಅಮೃತವನ್ನು ಉಣ್ಣಬಹುದೆಂತಲೂ ಯಾವುದೂ ಜ್ಞಾನಕ್ಕೆ ಸರಿಯಿಲ್ಲವೆಂತಲೂ ಹಿರಿಯರು ಹೇಳಿದ್ದಾರೆ. ಜ್ಞಾನಕ್ಕೆ ವಿದ್ಯೆಯೂ ವಿದ್ಯೆಗೆ ಓದು ಬರಹವು ತಳಹದಿ ಎಂದು ಹೇಳಿ ಆಮೇಲೆ ಸಮಿತಿಯ ಕಾರ್ಯವನ್ನು ವಿವರಿಸುತ್ತ ಸಮಿತಿಯವರು ರೀತಿ ನೀತಿಗಳನ್ನು ಏರ್ಪಡಿಸಿ, ಅಕ್ಷರಮಾಲೆಯ ಪಟ, ಓದುವ ಮೊದಲ ಪುಸ್ತಕಗಳು, ವಯಸ್ಕರ ತಿಳುವಳಿಕೆಯ ಪುಸ್ತಕಮಾಲೆ, ಭಂಡಾರ (ಪುಸ್ತಕ ಭಂಡಾರ) ಮುಂತಾದ ಪ್ರಕಟಣ ಕಾರ್ಯವನ್ನು ಕೈಗೊಂಡಿರುತ್ತಾರೆ ....ನಾಡ ಹಿರಿಯರೆ, ತಮ್ಮ ಸಹಾನುಭೂತಿ, ಸಹಾಯ, ಸಲಹೆಗಳಿಂದ ಅಗಾಧವೂ ಅಪಾರವೂ ಆದ ಆದರೆ ಅತ್ಯಗತ್ಯವಾದ ನಮ್ಮ ಕಾರ್ಯದಲ್ಲಿ ನಮಗೆ ಧೈರ್ಯವೂ ಮಾರ್ಗದರ್ಶನವೂ ಉಂಟಾಗುವುದೆಂಬ ನಂಬಿಕೆಯಿಂದ ಈ ಸಮ್ಮೇಳನ ಕರೆದಿರುತ್ತೇವೆ....ವಿದ್ಯಾವಂತರಾದ ಪ್ರಜೆಗಳ ಮೇಲೆ ಪ್ರಜಾಪ್ರಭುತ್ವ ನಿಂತಿದೆ ಎಂಬುದನ್ನು ಅರಿತವರು ಅದು ಬರಿಯ ಬಲವಲ್ಲ, ಬರಿಯ ಬಹುಮತವೇ ಅಲ್ಲ. ಹಕ್ಕುಗಳಿಗಿಂತಲೂ ಹೆಚ್ಚಾಗಿ ಜವಾಬ್ದಾರಿಯನ್ನು ಬಯಸುವ ಬಲ್ಲಾಳುಗಳ ಆಳಿಕೆ."

ಶ್ರೀಯುತರ ಈ ಜವಾಬ್ದಾರಿಪೂರಿತವಾದ ಗಂಭೀರವಾದ ಕರೆ ನಿಶ್ಚಲವಾಗಲಿಲ್ಲ ಸಫಲವಾಯಿತು. ಎಲ್ಲ ರಂಗದ ಜನರು ಸಮಿತಿಯ ಕಾರ್ಯಭಾರದಲ್ಲಿ ಪಾಲುಗೊಳ್ಳಲು ಮುಂದೆ ಬಂದರು. ಸರಕಾರದ ಆರ್ಥಿಕ ಸಹಾಯ ವರ್ಷಕ್ಕೆ ಹನ್ನೆರಡು ಸಾವಿರದಿಂದ ಒಂದು ಲಕ್ಷಕ್ಕೆ ಹೆಚ್ಚಿತು. ಕಾರ್ಯ ಯಶಸ್ವಿಯಾಗಿ ನಡೆದು ಇನ್ನೂ ಹೆಚ್ಚು ಹಣ ಬೇಕಾದರೆ ಕೊಡುವ ಭರವಸೆ ಬಂತು. ಸಮಿತಿಯ ಪ್ರಾರಂಭದಲ್ಲಿ ಅವರ ಪ್ರಭಾವ ಸಲಹೆ ನೇತೃತ್ವ ಒಂದು ಪ್ರೇರೇಪಣ ಶಕ್ತಿಯಾಗಿ ಚಳವಳಿಯ ಯಶಸ್ಸಿಗೆ ಕಾರಣವಾಯಿತು. ಸಮಿತಿಯ ಮುನ್ನಡೆ ಸುಗಮವಾಯಿತು.

ನ. ಭದ್ರಯ್ಯ

# ಬಿ. ಎಂ. ಶ್ರೀ ಅವರ
# ಜೀವನದ ಕೆಲವು ಸ್ವಾರಸ್ಯ ಪ್ರಸಂಗಗಳು

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರದು ತುಂಬಾ ಗಾಂಭೀರ್ಯ ಪ್ರಕೃತಿ. ಮಾತು ಮಿತ. ಹೆಚ್ಚುಮಂದಿಯವರೊಡನೆ ಸಾಮಾನ್ಯವಾಗಿ ಬೆರೆಯುವವರಲ್ಲ. ಆದುದರಿಂದ ಅವರ ಬಗ್ಗೆ 'ಸ್ವಾರಸ್ಯವಾದ ಸಂಗತಿಗಳು' ಹೆಚ್ಚು ಪ್ರಚಾರದಲ್ಲಿಲ್ಲ. ಅವು ಇಲ್ಲವೆಂತಲ್ಲ. ಆದರೆ ಅವು ವಿರಳ, ಹಾಗೆ ವಿರಳವಾದುವೂ ಇಂದಿನ ಪೀಳಿಗೆ ಯುವರಿಗೆ ತಿಳಿಯದು. ತಿಳಿದ ಜನರೂ ಈಗ ವಿರಳರಾಗುತ್ತಿದ್ದಾರೆ.

## ಒಂದು ಪ್ರಸಂಗ

ಒಮ್ಮೆ ಚರಿತ್ರಾರ್ಹವಾದ ಬಹಿರಂಗ ಚರ್ಚೆ (ಡಿಬೇಟ್) ನಡೆಯಿತು. ಬೆಂಗಳೂರು ಅಂದಿನ ಇಂಟರ್‌ಮೀಡಿಯೆಟ್ ಪ್ರಾಂಗಣವೇ ಸ್ಥಳ. ಚರ್ಚೆಯ ವಿಷಯ "ಆಧುನಿಕ ಕನ್ನಡ ಸಾಹಿತ್ಯ ಸಂಪ್ರದಾಯಘಾತಕವಾಗಿದೆ"— ಎಂಬುದು. ಈ ವಿಷಯ ಆ ಕಾಲದಲ್ಲಿ ಬಹು ಭಾವೋದ್ದೀಪಿಕವೂ ಕೌತುಕ ಕಾರಿಯೂ ಆಗಿತ್ತು. ವಿಷಯ ವಿವಾದಾತ್ಮಕವಾದದ್ದು. ಈ ವಿಷಯದ ಪ್ರಧಾನ ಪ್ರತಿಪಾದಕರು ಶ್ರೀ ತಿರುಮಲೆತಾತಾಚಾರ್ಯಶರ್ಮರವರು. ಅವರು ಸುಪ್ರಸಿದ್ಧ ವಾಗ್ಮಿಗಳು. ಹಾಗೆಯೇ ಈ ವಿಷಯದ ಪ್ರಧಾನ ವಿರೋಧಿಗಳಾಗಿ ವಾದಿಸಬೇಕಾಗಿದ್ದವರು ಕನ್ನಡ ಸಾಹಿತ್ಯದ ನವೋದಯ ಪ್ರವರ್ತಕರಾಗಿದ್ದ ಆಚಾರ್ಯ ಶ್ರೀ ಬಿ. ಎಂ. ಶ್ರೀಕಂಠಯ್ಯನವರು. ಆಗಿನ ವಿದ್ಯಾಧಿಕಾರಿಗಳಾಗಿದ್ದ ಶ್ರೀ ಎನ್. ಎಸ್. ಸುಬ್ಬರಾಯರು ಸಭಾಪತಿ (ಸ್ಪೀಕರ್) ಗಳಾಗಿದ್ದರು. ಎರಡೂ ಕಡೆ ಘಟಾನುಘಟಿಕರು ವಾದಿ ಪ್ರತಿವಾದಿಗಳಾಗಿ ಮಾತನಾಡಿದರು. ಬರುಬರುತ್ತ ವಾದಗಳಲ್ಲಿ ಕಾವೇರುತ್ತಿತ್ತು.

ಶ್ರೀ ತಾತಾಚಾರ್ಯ ಶರ್ಮರವರು ವಿಷಯ ಪ್ರತಿಪಾದನೆಯನ್ನು ಸೋದಾಹರಣವಾಗಿ ಮಾಡುತ್ತಾ, "ಪ್ರಳಯಕಾಲದ ರುದ್ರನಿಗೆ ಚೇಳು ಕಡಿದಂತೆ...." ಎಂಬ ಸಾಲನ್ನು ಉದ್ಧರಿಸಿ ಅದರಲ್ಲಿನ ಸ್ವವಿರೋಧ ಲಕ್ಷಣವನ್ನು ಹಾಸ್ಯಾಸ್ಪದ ವಾಗಿ ಬಣ್ಣಿಸಿದರು. ಸಂಪ್ರದಾಯವಾದಿಗಳಿಗೆ ಇಂತಹ ಕೃತಿಗಳಿಂದ ಬೇಸರ ಮತ್ತು ನೋವುಂಟಾಗಿದೆ ಎಂದು ಹೇಳಿದರು. 'ಶ್ರೀ'ಯವರಿಗೆ ಕೋಪಕ್ಕಿಂತ ಮನೋವ್ಯಾಕುಲತೆ ಬಹಳವಾಯಿತು. ಶರ್ಮರವರು ಉದಾಹರಿಸಿದ ಪದ್ಯದ ಸಾಲು ಪುಟ್ಟಪ್ಪನವರ ಕವಿತೆಯದು. ಶರ್ಮರ ಮಾತು ತಮ್ಮ ಶಿಷ್ಯರೂ ಮೆಚ್ಚಿನ ಕವಿಗಳೂ ಆಗಿದ್ದ ಪುಟ್ಟಪ್ಪನವರಿಗೆ ಆದ ಅವಮಾನವೆಂದು ಶ್ರೀ ಅವರು ಬಗೆ

ದರು. ಅದು ಚರ್ಚೆ ಎಂಬುದನ್ನು ಮರೆತು ಭಾವಾವಿಷ್ಟರಾದರು. ತಮ್ಮ ಒಳ ನೋಟವನ್ನು ತೋಡಿಕೊಂಡು ಘಾಸಿಯಾದವರಂತೆ ಮಾತನಾಡಿದರು. ಆದರೆ ಆಗ ಆ ಚರ್ಚೆಯಲ್ಲಿ ಭಾಗವಹಿಸಿದ್ದ ಮಾಸ್ತಿವೆಂಕಟೇಶಯ್ಯಂಗಾರ್ಯರು ಶ್ರೀ ಅವರ ವಾದಕ್ಕೆ ತಮ್ಮದೇ ಆದ ಉದಾಹರಣೆಗಳಿಂದ ಪುಷ್ಟಿ ಕೊಟ್ಟರು. ತಾವೇ ಒಂದು ಕಂದಪದ್ಯವನ್ನು ರಚಿಸಿ ಅದು ಎಷ್ಟೇ ಛಂದೋ ಬದ್ಧವಾಗಿದ್ದರೂ ಎಷ್ಟು ನೀರಸವಾಗಿದೆ ಎಂಬುದನ್ನು ತೋರಿಸಿಕೊಟ್ಟರು. ಅನಂತರ ಪುಟ್ಟಪ್ಪನವರ 'ಸುಗ್ಗಿ ಬರೆ....' ಎಂಬ ಕವಿತೆಯನ್ನು ಉದ್ಧರಿಸಿ ಹೊಸ ಕನ್ನಡ ಕಾವ್ಯದ ಜಾಡು ಸುಲಲಿತವಾಗಿದೆ ಎಂದರು. ಆಗ 'ಶ್ರೀ' ಅವರಿಗೆ ಸಮಾಧಾನವಾಯಿತು.

ಅನಂತರ ಶ್ರೀ ಎನ್. ಎಸ್. ಸುಬ್ಬರಾಯರು ಸಭಾಪತಿ ಸ್ಥಾನದಿಂದ 'ಶ್ರೀ' ಅವರ ನಿಲುವನ್ನು ಸಮರ್ಥಿಸಿ, ಅವರು ಕನ್ನಡನುಡಿಯ ಏಳಿಗೆಗಾಗಿ ನವ ಚೈತನ್ಯದ ಚಿಲುಮೆ ಚಿಮ್ಮಿ ಹರಿಯುವಂತೆ ಸ್ಫೂರ್ತಿಮೂಲರಾಗಿ ದುಡಿಯು ತ್ತಿರುವುದನ್ನು ಮನಸಾರ ಹೊಗಳಿ 'ಶ್ರೀ'ಯವರನ್ನು "ಕನ್ನಡದ ಕಾಲ್‌ವರ್ತ್" ಎಂದು ಕರೆದರು. ಇಂಗ್ಲಿಷ್ ಸಾಹಿತ್ಯದ ನವೋದಯ ಪ್ರವರ್ತಕರಾದ ಕೋಲ್‌ರಿಡ್ಜ್ ಮತ್ತು ವರ್ಡ್ಸ್‌ವರ್ತ್ ಕವಿಗಳಿಬ್ಬರ ಸಮಾಹೃತಸ್ವರೂಪರೆಂದು ಕೊಂಡಾಡಿದರು. ವೈರಸ್ಯ ಕೊನೆಗೊಂಡು ಸಾಮರಸ್ಯಮೂಡಿ ಸಭೆ ಸಂತೋಷ ದಿಂದ ಪರಿಸಮಾಪ್ತವಾಯಿತು.

## ಇನ್ನೊಂದು ಪ್ರಸಂಗ

ಸೆಂಟ್ರಲ್ ಕಾಲೇಜಿನ ಗಣಿತಶಾಸ್ತ್ರ ಭವನದಲ್ಲಿ, ಬಿ. ಎಂ. ಶ್ರೀ. ಅವರಿಂದ "The Influence of Sanskrit on Kannada"—ಎಂಬ ವಿಷಯವಾಗಿ ಇಂಗ್ಲಿಷಿನಲ್ಲಿ ಭಾಷಣವಾಯಿತು. ಆ ಕಾಲದಲ್ಲಿ 'ಶ್ರೀ'ಗಳವರು ಸಂಸ್ಕೃತ ಭಾಷಾಭಿಮಾನಿಗಳಲ್ಲ ಎಂಬ ಪ್ರತೀತಿ ಹರಡಿತ್ತು. ಆದುದರಿಂದ ಆ ಭಾಷಣದ ಬಗ್ಗೆ ಕನ್ನಡ ಮತ್ತು ಸಂಸ್ಕೃತ ಭಾಷಾಭಿಮಾನಿಗಳೆಲ್ಲರಿಗೂ ಕುತೂಹಲ ಹೆಚ್ಚಿತು. ಶ್ರೀ ಅವರು ಸಂಸ್ಕೃತ ಸಾಹಿತ್ಯದ ಹಿರಿಮೆಯನ್ನು ಉದಾಹರಣೆಗಳಿಂದ ತಿಳಿಸಿ ಅನಂತರ ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ ಹೇಗೆ ಹಾಸುಹೊಕ್ಕಾಗಿ ಬೆರೆತಿದೆ ಎಂಬುದನ್ನು ತೋರಿಸಿದರು ಮತ್ತು ಸಂಸ್ಕೃತದ ಪ್ರಭಾವವೇ ಪ್ರಧಾನವಾಗಿ ಕನ್ನಡಗೌಣವಾಗಿರುವಂತೆ ಬೆಳೆದು ಬಂದಿರುವ ಸಾಹಿತ್ಯ ಪ್ರಕಾರಗಳನ್ನು ಉದ್ಧರಿಸಿದರು. ಸಂಸ್ಕೃತದ ಪ್ರಭಾವ ಅತೀ ಹೆಚ್ಚಾಗಿ ಕನ್ನಡ ಕಾವ್ಯಗಳು ವಾಸ್ತವವಾಗಿ ಸಂಸ್ಕೃತದ ಕಾವ್ಯಗಳಂತೆ ವಿಜೃಂಭಿಸುತ್ತಿರುವು

ಧನ್ನು ಸಹಿಸಲಾರರೆಂಬಂತೆ ಆವೇಶಪೂರಿತವಾಗಿ ಮಾತನಾಡುತ್ತ ಭಾವಾತಿರೇಕದಲ್ಲಿ "Sanskrit has Crushed Kannada, Stifled Kannada and ಕೊಚ್ಚುಫೈಡ್ our tender Kannada"—ಎಂದರು. ಅವರ ಭಾವಾತಿರೇಕದ 'ಕೊಚ್ಚುಫೈಡ್' ಪದ ಭಾಷಾಮರ್ಯಾದೆಯ ಮೇರೆ ಮೀರಿದಂತಾಗಿ ಹಲವರಿಗೆ 'ಅಶ್ರಾವ್ಯ'ವೆನಿಸಿತು. ಬಿರುಮಳೆ ನಿಂತಂತೆ ಸದ್ದಡಗಿ ಶಾಂತಸ್ಥಿತಿ ಮರಳಿದಕೂಡಲೇ ಮುಂದಿನ ಸಾಲಿನಿಂದ 'A Voice of Protest' ಎಂಬ ಮಾತು ಕೇಳಿ ಬಂತು. ನೋಡಿದಾಗ ರುಮಾಲು ಸುತ್ತಿ ಬಿಳಿ ಮೀಸೆ ಹೊತ್ತ ಕೆಂಪೇರಿದ ಮುಖದ ಪಂಜೆ ಮಂಗೇಶರಾಯರು ನಿಂತಿದ್ದರು. ಸಭೆಗೆಲ್ಲಾ ಅಚ್ಚರಿ. ಅಂಜದೆ ಅಳುಕದೆ ಪಂಜೆಯವರು ಇಂಗ್ಲಿಷಿನಲ್ಲೇ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಅವರ ಅಸಮಾಧಾನ 'ಶ್ರೀ' ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳಿಗಲ್ಲ. ಅಂತಹ ಅನನ್ಯ ಸಾಧಾರಣ ಭಾಷಣದ ನಡುವೆ ವಿವಶರಾಗಿ ಬಳಸಿದ 'ಕೊಚ್ಚುಫೈಡ್' ಎಂಬ ಅಪಶಬ್ದದ ವಿರುದ್ಧ. ನಮ್ಮನ್ನು ತಮ್ಮ ಉದ್ಧಾಮ ಭಾಷಣ ವಿಮಾನದಲ್ಲಿ ಗಗನವಿಹಾರಿಗಳನ್ನಾಗಿ ಒಯ್ಯುತ್ತ ಹಠಾತ್ತಾಗಿ ಹಕ್ಕಿ ಹಿಕ್ಕೆ ಹಾಕಿದಂತೆ ಕೆಳಕ್ಕೆ ಬೀಳಿಸಿಬಿಟ್ಟಿರಿ. ಇಂತಹ ಪ್ರಮಾದ ಮತ್ತೆಂದೂ ಬೇಡ—ಎಂಬುದು ಅವರ ಇಂಗ್ಲಿಷ್ ಮಾತುಗಳ ಸಾರಾಂಶವಾಗಿದ್ದಿತು—ಅನಂತರ ತಮ್ಮ ಭಾಷಣವನ್ನು 'ಶ್ರೀ' ಅವರು ಮುಂದುವರೆಸಿ ಆ ಪದ ಭಾವಾತಿರೇಕದಲ್ಲಿ ಬಂದುದೆಂದೂ ಆದರೆ ಆ ಮಾತಿನ ಅಭಿಪ್ರಾಯ ಸತ್ಯವಾದುದೆಂದೂ ತಿಳಿಸಿದರು. ಪಂಪನ ಪದ್ಯಗಳನ್ನು ದೃಷ್ಟಾಂತವಾಗಿ ಓದುತ್ತಿರುವಾಗ ನಡುವೆ 'ಯುಷ್ಮತ್ಪದ ಪಾಂಸುಗಳಿಂದ ಪಾವನ' (ನಾವೆ) ಎಂಬ ಪದಪುಂಜ ಅವರ ಬಾಯಿಂದ ಬಂದಿತು. ಸಭಾಸದರು ನಕ್ಕರು. 'ಶ್ರೀ' ಅವರೂ ನಕ್ಕರು. ಅವರ ಭಾಷಣ ಕನ್ನಡದ ಮೇಲಿನ ಅಭಿಮಾನವನ್ನು ಪ್ರದರ್ಶಿಸಿತೇ ವಿನಾ ಸಂಸ್ಕೃತದ ಬಗ್ಗೆ ಅವಹೇಳನವನ್ನಲ್ಲ. ಅವರು ಸ್ವಯಂ ಸಂಸ್ಕೃತ ವಿದ್ವಾಂಸರಾಗಿದ್ದರು. ಕನ್ನಡದ ಜೊತೆಗೆ ಸಂಸ್ಕೃತವನ್ನೂ ಕಲಿಯಬೇಕೆಂದು ಹೇಳುತ್ತಿದ್ದರು. ಸಂಸ್ಕೃತಾಭಿಮಾನಿಗಳೂ ಆಗಿದ್ದರು.

## ಮತ್ತೊಂದು ಪ್ರಸಂಗ

ಮತ್ತೊಮ್ಮೆ ಗಣಿತಶಾಸ್ತ್ರ ಸಭಾಭವನದಲ್ಲಿ ಶ್ರೀ ಅವರಿಂದ ಮತ್ತೊಂದು ಭಾಷಣವಾಯಿತು. ವಿಷಯ "Burden of the Prophets", ಈ ಸಂದರ್ಭದಲ್ಲಿ 'ಶ್ರೀ'ಗಳವರು ಪ್ರಪಂಚದ ಎಲ್ಲ ಪ್ರಧಾನ ಪ್ರವಾದಿಗಳ ಉಪದೇಶ

ಗಳನ್ನು ವಿವರಿಸಿದರು. ಉಪನಿಷತ್ತುಗಳ ಉಪದೇಶಾಮೃತವನ್ನು ವಿವರಿಸುವಾಗ ಏಕಪ್ರವಾದಿಯ ವಾಣಿ ಇಲ್ಲದ ಪ್ರಯುಕ್ತ ಮಂತ್ರದ್ರಷ್ಟಾರರಾದ ಋಷಿಗಳ ಸಮೀಚೀನ ಸಮಾಹೃತ ತತ್ತ್ವಜಿಜ್ಞಾಸೆ ಮಾಡಿ ಕಠೋಪನಿಷತ್ತನ್ನು ವಿಸ್ತಾರವಾಗಿ ವಿವೇಚಿಸಿದರು. ಮೂಲತಃ ಧರ್ಮಶ್ರದ್ಧೆಯಿಲ್ಲದೆ ಮಾಡಿದ ಸಾಂಪ್ರದಾಯಕ ಕರ್ಮಾಚರಣೆ ಅಸಾರ್ಥಕವಾದುದೆಂಬುದನ್ನು ಬಾಲಕನಾದ ನಚಿಕೇತನು ಗ್ರಹಿಸಿ ಮೃತ್ಯುರಹಸ್ಯ ತಿಳಿದು ಅಮೃತತ್ವಹೊಂದುವ ದಾರಿಯನ್ನು ಅರಿಯಲು ಮೃತ್ಯುದೇವತೆಯಾದ ಯಮನಲ್ಲಿಗೆ ಹೋದ ಆಧ್ಯಾತ್ಮಿಕ ಸಾಹಸವನ್ನು ವಿವರಿಸಿದರು. ಇಡೀ ದಾರ್ಶನಿಕ ವಾಙ್ಮಯದಲ್ಲಿ ನಚಿಕೇತನನಂತಹ ಬಾಲಸಾಹಸಿ ಮತ್ತು ಪರಮಾರ್ಥಸಾಧಕ ಬೇರೊಬ್ಬನಿಲ್ಲವೆಂಬುದನ್ನು ಮನದಟ್ಟುವಂತೆ ವರ್ಣಿಸಿದರು. ಅಸ್ತಿ–ನಾಸ್ತಿಗಳ ಸದಸದ್ವಿವೇಕ ಸ್ಫುಟಗೊಂಡಿತು. ಅದರಲ್ಲೂ "ಪರಾಂಚಿ ಖಾನಿ ವ್ಯತೃಣಾತ್ಸ್ವಯಂಭೂಸ್ತಸ್ಮಾತ್ಪರಾಕ್ ಪಶ್ಯತಿನಾಂತರಾತ್ಮನ್! ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷು ರಮೃತತ್ವಮಿಚ್ಛನ್ ||"—ಎಂಬ ಶ್ಲೋಕದ ಮೇಲೆ 'ಶ್ರೀ'ಯವರು ಮಾಡಿದ ವ್ಯಾಖ್ಯಾನವಂತೂ ಅತ್ಯಂತ ಅಮೋಘವಾಗಿದ್ದಿತು. ಮೋಕ್ಷವನ್ನು ಇಚ್ಛಿಸುವ ಜ್ಞಾನಿಯು ಹೊರಗೆ ನೋಡುವ ಕಣ್ಣನ್ನು ಒಳಗೆ ತಿರುಗಿಸಿಕೊಂಡು ಅಮೃತತ್ತ್ವವನ್ನು ಬಯಸಿ ಅಂತರಾತ್ಮವನ್ನು ಕಂಡುಕೊಳ್ಳುವನು—ಎಂದು ವಿವರಿಸಿದರು. ಆ ಸಂದರ್ಭದಲ್ಲಿ ವರ್ಡ್ಸ್‌ವರ್ತ್ ಕವಿಯ "That inward eye which is the bliss of Solitude"—ಎಂಬ ಪದ್ಯಪಾಠವನ್ನು ಉದಾಹರಿಸಿದರು. ಮುಖ್ಯವಾಗಿ ಈ ಉಪನ್ಯಾಸದಲ್ಲಿ ಪ್ರಪಂಚದ ಎಲ್ಲ ಮತ ತತ್ತ್ವಗಳ ಎಲ್ಲ ಪ್ರವಾದಿಗಳ ಬಗ್ಗೆ 'ಶ್ರೀ' ಅವರ ಆಳವಾದ ಅಧ್ಯಯನ ತಿಳಿವಳಿಕೆ ಅವುಗಳ ಅಂತರ್ಭಾವವನ್ನು ಸೂಚಿಸುವ ಇಂಗ್ಲಿಷ್ ಕವಿತೆಗಳ ಕವಿಗಳ ಮನೋಧರ್ಮ—ಇವುಗಳು ಪ್ರಕಾಶಗೊಂಡವು.

## ಇಂಗ್ಲಿಷ್ ಸೆಮಿನಾರ್

ಈ ಸಂದರ್ಭದಲ್ಲಿ 'ಶ್ರೀ' ಅವರು ಸೆಂಟ್ರಲ್ ಕಾಲೇಜಿಗೆ ಇಂಗ್ಲಿಷ್ ಪ್ರಾಚಾರ್ಯರಾಗಿ ಬಂದಂದಿನಿಂದ ನಿವೃತ್ತರಾಗುವವರೆಗೂ ಅವರು ಆಗಾಗ ನಡೆಸುತ್ತಿದ್ದ 'ಸೆಮಿನಾರ್' ಎಂಬ ವಿದ್ವದ್ವಿಚಾರ ಗೋಷ್ಠಿಯ ವಿಷಯದ ಕೆಲವು ವಿಷಯಗಳನ್ನು ತಿಳಿಸುವುದು ಸೂಕ್ತವೆಂದು ತೋರುತ್ತದೆ. ಪ್ರತಿ ಮಂಗಳವಾರ ಸಂಜೆ ೫–೩೦ ಗಂಟೆಗೆ ಈ ವಿದ್ವದ್ಗೋಷ್ಠಿ ಸೇರುತ್ತಿತ್ತು.

ಕಾರ್ಯಾರಂಭ ಸಕಾಲಕ್ಕೆ ಆಗುತ್ತಿದ್ದರೂ ಮುಕ್ತಾಯಕ್ಕೆ ಕಾಲಮಿತಿ ಇರುತ್ತಿರಲಿಲ್ಲ. ಕೆಲವು ದಿವಸಗಳಲ್ಲಿ ರಾತ್ರಿ ೯, ೯-೩೦ ಗಂಟೆಯುವರೆಗೂ ಈ ಚರ್ಚಾಗೋಷ್ಠಿ ಮುಗಿಯುತ್ತಿರಲಿಲ್ಲ. ವಿಷಯ ಗಹನವಾದುದ್ದಾಗಿದ್ದು ಗ್ರಂಥದ ಸ್ವಾರಸ್ಯ, ಭಾಗಿಗಳ ಉತ್ಸಾಹ, ಪ್ರತಿಪಾದನಾ ಮಾಧುರ್ಯ, ಕೊನೆಗೆ 'ಶ್ರೀ' ಅವರ ವೈಚಾರಿಕ ಅಧ್ಯಕ್ಷ ಭಾಷಣ—ಇವುಗಳಿಗೆ ಕಾಲಮಿತಿಯನ್ನು ಗೊತ್ತು ಮಾಡುವುದಾಗುತ್ತಿರಲಿಲ್ಲ. ವಿಷಯ ವೈವಿಧ್ಯವಂತೂ ಮಿತಿ ಇಲ್ಲದ್ದು. "ಮಾಣಿಕ್ಯವೀಣಾಮುದಲಾಲಸಂತೀಂ" ಎಂದು ಪ್ರಾರಂಭಮಾಡಿದ ಕವಿ ಕಾಳಿದಾಸನಿಂದ ಹಿಡಿದು 'ಜನಗಣಮನ ಅಧಿನಾಯಕ ಜಯಹೇ'—ಎಂದು ಹಾಡಿದ ಕವಿ ರವೀಂದ್ರರವರೆಗಿನ ಕಾವ್ಯ ನಾಟಕ ಮೀಮಾಂಸೆ, ಚೀನಾದ ಲಾವೋತ್ಸೆಯಿಂದ ಹಿಡಿದು ಅಮೆರಿಕದ ಎಮರ್ಸನ್ ಥೋರೋವರೆಗೆ, ಗ್ರೀಕ್ ರುದ್ರ ನಾಟಕಕಾರ ಏಸ್‌ಕಲಸ್‌ನಿಂದ ಹಿಡಿದು ಇಬ್ಸನ್ ಬರ್ನಾರ್ಡ್‌ಷಾ ಇಲಿಯಟ್‌ರವರೆಗೆ, ಮಿಲ್ಟನ್ ವರ್ಡ್ಸ್‌ವರ್ತ್ ಕೋಲ್‌ರಿಡ್ಜ್ ಟೆನಿಸನ್ ಕವಿ ಪರಂಪರೆವರೆಗೆ, ಪ್ಲೇಟೋ ಅರಿಸ್‌ಟಾಟಲ್‌ರವರ ಮೇರುಕೃತಿಗಳು, ಕಡೆಗೆ ಹಿಟ್ಲರನ ಮಿನ್‌ಕ್ಯಾಂಫ್—ಈ ಎಲ್ಲ ವಿಷಯುಗಳ ಬಗ್ಗೆಯೂ ಅಧ್ಯಯನ ನಡೆಯುತ್ತಿತ್ತು. 'ಶ್ರೀ' ಅವರ ಜ್ಞಾನಕ್ಕೆ ತಿಳಿವಳಿಕೆಗೆ ಎಲ್ಲೆಯುಂಟೆ? ಇಂತಹ ಜ್ಞಾನ ಸಮಾರಾಧನೆ ಇದುವರೆಗೆ ಬೇರೆ ನಡೆದುದಿಲ್ಲ. 'ಶ್ರೀ' ಅವರಂತೆ ಆಳವಾದ ವಿಸ್ತಾರವಾದ ವಿಮರ್ಶಾಪೂರ್ಣವಾದ ವಿದ್ವತ್ತನ್ನು ಸಂಪಾದಿಸಿದವರು ಯಾರಿದ್ದಾರೆ? ಯಾರಿಂದ ಸಾಧ್ಯ?

## ವೈಯಕ್ತಿಕ

ನಾನು ಇಂಟರ್ ಪಾಸಾದಾಗ ಎರಡನೆಯ ರ್‍ಯಾಂಕ್ ಪಡೆದಿದ್ದೆ. ಚರಿತ್ರೆಯ ವಿಭಾಗ ವ್ಯಾಸಂಗಮಾಡಿದ್ದರಿಂದ ಬಿ.ಎ. ಓದಲು ಮೈಸೂರಿಗೆ ಹೋಗಬೇಕಾಗಿತ್ತು. ಆದರೆ ನಾವಾಗ ತುಂಬಾ ಬಡತನದಲ್ಲಿದ್ದೆವು. ಯಾರೋ ನಮ್ಮ ತಂದೆಯ ಮಿತ್ರರು ಧನಸಹಾಯಮಾಡಿ ಸೆಂಟ್ ಜೋಸೆಫ್ ಕಾಲೇಜಿಗೆ ಸೇರಿಸಿದರು. ಆದರೆ ತಿಂಗಳು ತಿಂಗಳ ಫೀಸು ಕೊಡುವುದು ಹೇಗೆ. ಗುಂಡಪ್ಪನವರು ನಮಗೆ ಇಂಗ್ಲಿಷ್ ಪಾಠವನ್ನು ಹೇಳುತ್ತಿದ್ದರು. ನಾನು ಇಂಗ್ಲಿಷ್ ವಿಭಾಗದಲ್ಲಿ ತುಂಬಾ ಬುದ್ಧಿವಂತನೆನಿಸಿಕೊಂಡದ್ದರಿಂದ 'ಶ್ರೀ' ಅವರ ಅಳಿಯಂದಿರಾದ ಗುಂಡಪ್ಪನವರ ಅಭಿಮಾನವನ್ನು ಸಂಪಾದಿಸಿದ್ದೆ. ಗುಂಡಪ್ಪನವರು ನನಗೆ ತಿಂಗಳು ತಿಂಗಳೂ ಫೀಸಿಗೆಂದು ಸಹಾಯ ಮಾಡುತ್ತಿದ್ದರು. ಅವರ ಹೆಂಡತಿ ಅಂದರೆ 'ಶ್ರೀ' ಅವರ ಮಗಳು ಕೈಗೆ ತಂದುಕೊಡುತ್ತಿದ್ದರು. ದುರದೃಷ್ಟವಶಾತ್

ಗುಂಡಪ್ಪನವರು ತೀರಿಕೊಂಡರು. ಅದು ನನಗೆ ತಿಳಿಯದು. ನಾನು ಎಂದಿನಂತೆ ಫೀಸಿನ ಚಂದಾ ಕೇಳಲು 'ಶ್ರೀ' ಅವರ ಮನೆಗೆ ಹೋದೆ. ಆ ಸನ್ನಿವೇಶ ತುಂಬಾ ಹೃದಯ ವಿದ್ರಾವಕವಾದುದು. ನಾನು ಏತಕ್ಕೆ ಅಲ್ಲಿಗೆ ಹೋಗಿದ್ದೆನೆಂಬುದು 'ಶ್ರೀ' ಅವರಿಗೆ ತಿಳಿಯಿತು. ಅವರ ಮಗಳು ಗುಂಡಪ್ಪನವರು ಮಾಡುತ್ತಿದ್ದ ಸಹಾಯವನ್ನು 'ಶ್ರೀ' ಅವರಿಗೆ ತಿಳಿಸಿದರು. ಆಗ 'ಶ್ರೀ'ಗಳವರು ತಾವೇ ಬಂದು ಗುಂಡಪ್ಪನವರು ಕಾಲವಾದರೆಂದು ತಿಳಿಸಿದರು. ಅವರ ಮಾತು ಕೇಳಿ ನಾನು ಸ್ತಂಭೀಭೂತನಾಗಿ ಅವರ ಕ್ಷಮೆಯನ್ನು ಬೇಡಿದೆ. ಅವರು ಸಮಾಧಾನಮಾಡಿ ಒಂದು ಕವರನ್ನು ಕೊಟ್ಟರು. ನಾನು ಕೃತಜ್ಞತೆ ತಿಳಿಸಿ ಬಂದೆ. ಆ ಕವರಿನಲ್ಲಿ ದಿವಂಗತ ಗುಂಡಪ್ಪನವರು ನನಗೆ ತಿಂಗಳು ತಿಂಗಳೂ ಕೊಡುತ್ತಿದ್ದ ಮೊಬಲಗಿನ ಹನ್ನೆರಡರಷ್ಟು ಹಣ ಇಟ್ಟಿದ್ದರು. ಹೀಗೆ ಅವರು ವಿದ್ಯಾರ್ಥಿಗಳಿಗೆ ಕೊಡುಗೆ ಯಿಂದ ಕೊಡುತ್ತಿದ್ದ ದಾನ ಧರ್ಮಗಳು ಯಾರಿಗೂ ತಿಳಿಯವು.

ನಾನು ಗ್ರಾಜುಯೇಟಾಗಿ ಕನ್ನಡ ಶೀಘ್ರಲಿಪಿಕಲಿತು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸಕ್ಕೆ ಸೇರಿದ್ದೆ. ಆಗ ಪರಿಷತ್ತು ಭಾಸ್ಕರರಾಯ ಸ್ಪರ್ಧೆ ಎಂಬ ಸ್ಪರ್ಧೆ ಏರ್ಪಡಿಸಿತು. ಸ್ಪರ್ಧೆಯ ವಿಷಯ "ತೊರವೆ ರಾಮಾಯಣದ ವಿಮರ್ಶೆ" ಅನೇಕ ಕನ್ನಡ ಅಧ್ಯಾಪಕರುಗಳು ಮತ್ತು ಕನ್ನಡ ಪಂಡಿತರು ಲೇಖನಗಳನ್ನು ಕಳಿಸಿದ್ದರು. ನಾನೂ ಒಂದು ಲೇಖನ ಕಳಿಸಿದೆ. 'ಶ್ರೀ' ಅವರು ಎ. ಆರ್. ಕೃಷ್ಣಶಾಸ್ತ್ರಿಗಳು ಮತ್ತು ಪಂಜೆ ಮಂಗೇಶರಾಯರುಗಳು ಪರೀಕ್ಷಕರಾಗಿದ್ದರು. ನನ್ನ ಲೇಖನಕ್ಕೆ ಬಹುಮಾನ ಬಂತು. ಈ ಲೇಖನ ಕನ್ನಡಸಾಹಿತ್ಯ ಪರಿಷತ್ಪತ್ರಿಕೆ ಯಲ್ಲಿ ಅಚ್ಚಾಗಿದೆ. ಬಹುಮಾನದ ಮೌಲ್ಯವನ್ನು ಪುಸ್ತಕ ರೂಪದಲ್ಲಿ ಕೊಡ ಬೇಕೆಂದು ಗೊತ್ತಾಗಿತ್ತು. ಆಗ 'ಶ್ರೀ' ಅವರು ಪರಿಷದಧ್ಯಕ್ಷರಾಗಿದ್ದರು. ನಾನು ಅವರನ್ನು ಕಂಡು ಬಹುಮಾನ ಪುಸ್ತಕ ರೂಪದಲ್ಲಿ ಬೇಡವೆಂದು ವಿನಂತಿಸಿ ಕೊಂಡೆ. ಹಾಗಾದರೆ ನಗದು ಹಣಬೇಕೆ? ಎಂದು 'ಶ್ರೀ' ಅವರು ಕೇಳಿದರು, ನಾನು ಜ್ಞಾಪಕಾರ್ಥವಾಗಿ ಏನಾದರೂ ಬೆಲೆ ಬಾಳುವ ವಸ್ತುವನ್ನು ಕೊಡಿಸ ಬೇಕೆಂದು ಕೇಳಿಕೊಂಡೆ. ಅವರಿಗೆ ತುಂಬಾ ಸಂತೋಷವಾದಂತೆ ಕಂಡಿತು. ನನ್ನ ಲೇಖನವ ಬಗ್ಗೆ ಉತ್ತೇಜಕವಾದ ಮಾತನ್ನಾಡಿ ಕನ್ನಡ ಕಾವ್ಯಗಳನ್ನು ಇನ್ನೂ ಆಳವಾಗಿ ಅಭ್ಯಾಸಮಾಡಬೇಕೆಂದು ಹೇಳಿದರು. ಒಂದು ದೊಡ್ಡ ಬೆಳ್ಳಿಯ ಬಟ್ಟಲನ್ನು ಬಹುಮಾನವಾಗಿ ಕೊಡಿಸಿದರು. ಅವರ ಅಂದಿನ ಉತ್ತೇಜಕವಾದ ಉಪದೇಶ ನನ್ನನ್ನು ಇಷ್ಟುಮಟ್ಟಿನ ಸಾಹಿತಿಯನ್ನಾಗಿ ಬೆಳೆಸಲು ಸಹಾಯಕ ವಾಯಿತೆಂದು ನಾನು ನಂಬಿದ್ದೇನೆ.

ಕೈವಾರ ರಾಜಾರಾವ್

# 'ಶ್ರೀ'ಯವರ ಕೆಲವು ಸವಿನೆನಪು

ಶ್ರೀರಂಗಪಟ್ಟಣದಲ್ಲಿ ಹಿಂದೆ ವಕೀಲರಾಗಿದ್ದ ನಮ್ಮ ತಂದೆ ಬೆಳ್ಳೂರು ಮೈಲಾರಯ್ಯನವರಿಗೆ ನಾವು ಐವರು ಮಕ್ಕಳು—ಯಾರೆಂದರೆ ಹಿರಿಯ ಶ್ರೀಕಂಠಯ್ಯ, ಕಾವೇರಮ್ಮ, ಸಂಜಮ್ಮ, ಮಧ್ಯದ ಶುನಸ್ಸೇಫ ಇನ್ನೂ ಬದುಕಿರುವ ನಾನು ಶಿವರಾಮಯ್ಯ, ಕೊನೆಯ ಕಿರಿಯ ಕೃಷ್ಣಸ್ವಾಮಿ. ನಮ್ಮ ತಾಯಿ ಸಂಪಿಗೆಯ ಭಾಗೀರಥಮ್ಮನವರು, ನನ್ನ ಹಿರಿಯ ಅಣ್ಣಂದಿರಿಗೂ ನನಗೂ ೧೨ ವರುಷದ ಮೇಲಿನ ಅಂತರವಿತ್ತು. 'ಶ್ರೀ'ಯವರ ಜನ್ಮಸ್ಥಳ ಮಾತೃತವರು ಸಂಪಿಗೆ (ಚಂಪಕಾಪುರಿ) ಸುಧನ್ವ ಪ್ರಸಿದ್ಧ ಕ್ಷೇತ್ರ! ತುಮಕೂರು ಬಳಿ.

ನಮ್ಮ ತಂದೆ ನನ್ನ ೧೨ನೆ ವಯಸ್ಸಿನಲ್ಲಿ ತೀರಿದ್ದರು. ನಂತರ ನನಗೆ ಎಲ್ಲ ವಿದ್ಯಾಬುದ್ಧಿ ಕಲಿಸಿ ವಿವಾಹ ಮಾಡಿ ನನ್ನನ್ನು ಮುಂದಕ್ಕೆ ತಕ್ಕ ಜೀವನದ ಪಥವಲ್ಲಿ ನಿಲ್ಲಿಸಿದವರು (ನನ್ನ ತಮ್ಮನನ್ನೂ ಸಹ) 'ಶ್ರೀ'ಯವರೇ.

'ಶ್ರೀ'ಯವರ ಬಾಲ್ಯಜೀವನ ವಿಚಾರ ನಾನು ಹೆಚ್ಚು ಕಂಡವನಲ್ಲ. ಆದರೂ ಮನೆಯವರಿಂದಲೂ ಇತರರಿಂದಲೂ ಕೇಳಿತಿಳಿದಿರುವ ಹಾಗೂ ಈಚೆಗೆ ನಾನು ಕಂಡಿರುವ ಅವರ ಜೀವನದಲ್ಲಿನ ಕೆಲವು ಸ್ವಾರಸ್ಯ ಘಟನೆಗಳನ್ನು ಇಲ್ಲಿ ಓದುಗರ ಮುಂದಿಡುತ್ತೇನೆ. ಇವಲ್ಲದೆ ನಾನು ಕಾಣದ ಮತ್ತು ಹೇಳಲಾಗದ ಇನ್ನೂ ಇತರ ವಿಷಯಗಳೆಷ್ಟೋ ಇವೆ—ಯಥಾರ್ಥವಾದೀ ಆಪ್ತನಿಗೆ ನಾನು ಶ್ರೀಯವರ ಆಪ್ತನಷ್ಟೇ—ಇದ್ದದ್ದು ಇದ್ದಂತೆಯೇ ಹೇಳಿರುತ್ತೇನೆ.

ಬಾಲ ಶ್ರೀಕಂಠ ಚಿಕ್ಕತನದಲ್ಲಿ ಬಹಳ 'ತುಂಟ'ನಾಗಿದ್ದನೆಂದು ಹೇಳುತ್ತಿದ್ದರು. ಇತರ ಬೀದಿ ಹುಡುಗರನ್ನು (ಶ್ರೀರಂಗಪಟ್ಟಣದಲ್ಲಿ) ತನ್ನ ಜೊತೆಗೆ ಕರೆದುಕೊಂಡು ಹೋಗಿ ಅವರಿವರ ಮನೆ ಹಿತ್ತಲು, ತೋಟ, ಅಲ್ಲಿನ ನದಿದಡ (ಕಾವೇರಿದಂಡೆ) ಅಲೆದಾಡಿಕೊಂಡು ಅಲ್ಲಲ್ಲಿನ ಕಾಯಿಕಸರು ಫಲಪುಷ್ಪಗಳನ್ನು ಲೂಟಿಮಾಡುವುದು, ನೊಂದವರು ನಮ್ಮ ತಾಯಿತಂದೆಗಳಿಗೆ ದೂರು ಹೇಳುವುದೂ ಅವರಿಂದ ಶಿಕ್ಷಿಸಲ್ಪಡುವುದೂ ಆಗುತ್ತಿತ್ತು. ಒಂದು ದಿನ ಮನೆಯಲ್ಲಿ ತಂದೆಯವರು ಇಟ್ಟಿದ್ದ ೧೦೦ ರೂಪಾಯಿ ನೋಟು ಒಂದನ್ನು ತಾನು ತೆಗೆದುಕೊಂಡು ಅದನ್ನು ಆಟಕ್ಕೆಂದು ಹರಿದು ಆ ಚೂರುಗಳನ್ನು ತನ್ನ ಪುಸ್ತಕದಲ್ಲಿ ಸೇರಿಸಿದ್ದನ್ನು ನಮ್ಮ ತಂದೆ ಪತ್ತೆಮಾಡಿ ಶಿಕ್ಷಿಸಲ್ಪಟ್ಟಿದ್ದ ಬಾಲ್ಯ ಶ್ರೀ. ತಂದೆಯವರು ನಂತರ ಅದನ್ನೆಲ್ಲಾ ಸರಿಯಾಗಿ ಜೋಡಿಸಿ ಅಂಟಿಸಿ

ಆದನ್ನು ಖಜಾನೆಗೆ ಕೊಟ್ಟು ಸುಧಾರಿಸಿಕೊಂಡಿದ್ದರು. ಅದರ ಬೆಲೆ ಕಾಣದಿದ್ದ ಹುಡುಗ ಪಾಪ !

ಶ್ರೀಕೃಷ್ಣನ ಬಾಲ್ಯ ಚೇಷ್ಟೆಗಳ ಗೋಪಿಕೆಯರ ದೂರು ಯಶೋದದೇವಿ ವರೆಗೂ ಹೋಗಿದ್ದಾದರೆ ಬಾಲ 'ಶ್ರೀ'ಕಂಠನ ಚೇಷ್ಟೆಗಳು ಯಶೋದವೇವಿಯು ವರೆಗೂ ಹೋಗಲು ಮಾರ್ಗವಾಯಿತು ! 'ಶ್ರೀ'ಯು ಬೆಣ್ಣೆ ಕಳ್ಳನಾಗದೆ ಹಣ್ಣು ಕಳ್ಳನಾಗಿ, ಶೃಂಗಾರಕ್ರೀಡೆ ಆಗದೆ ಆಗಿನ ಹುಡುಗಾಟಿಕೆಗಳೆಲ್ಲ ಮುಂದೆ ದೊಡ್ಡಾಟದ ಜ್ಞಾನಕ್ರೀಡೆಯಾಗಿ, ಶೃಂಗಾರವೇನಿದ್ದರೂ ಸಾಹಿತ್ಯದಲ್ಲಿ ಚೆಲ್ಲಾಟವಲ್ಲಿ ಪರಿಣಮಿಸಿದ್ದಾಯಿತು. 'ಅವಳ ಲಂಗ ಇವಳಿಗೆ ತೊಡಿಸಿ, ಇವಳ ಸೀರೆ ಅವಳಿಗೆ ಉಡಿಸಿ' ಎಂಬಂತಹ ನಾಟ್ಯವಾಡಿ ಮೆಚ್ಚುಗರ ತಲೆತೂಗಿಸಿತು. ಇಂಗ್ಲಿಷ್ ಗೀತೆ ಹಾಡಿ ಕನ್ನಡ ಸಾಂಗ್ಸ್ (ಸಂಗೀತ) ಆಯಿತು ! ಬಾಲ 'ಶ್ರೀ'ಯ ಆಗಿನ ಕಪಿಚೇಷ್ಟೆಗಳು ಮುಂದಿನ ಪ್ರೌಢ 'ಶ್ರೀ'ಯ ಕವಿಚೇಷ್ಟೆ ಗಳಿಗೆ ದಾರಿ ಆಯಿತು ! ಶೃಂಗಾರವೆಲ್ಲ ಸಾಹಿತ್ಯದಲ್ಲಿ ಅಡಗಿತು ಕರಕರಗಿ.

ಯೌವನದಲ್ಲಿ 'ಶ್ರೀ'ಯುವರದು ಬಗೆಬಗೆಯುವಿದ್ದವಂತೆ, ಆದರೆ ಅವು ಯಾವುದೂ ಯೌವನಂ, ಧನಸಂಪತ್ತಿಃ ಪ್ರಭುತ್ವಮ ವಿವೇಕತಾ, ಎಂಬಂತೆ ಅಂತೂ ಇರಲಿಲ್ಲ. ಮದರಾಸಿನ ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಾ ಜತೆಗಾರ ರೊಂದಿಗೆ ಸೇರಿ ತಾವಿದ್ದ ಕೊಠಡಿಯಲ್ಲೇ ಸ್ಟೋವೊಲೆಯ ಮೇಲೆ ತಮಗೆ ಬೇಕಾದ ಬಗೆಬಗೆಯ ರುಚಿಕರವಾದ ತಿಂಡಿತಿನಿಸುಗಳನ್ನು ಮಾಡಿಕೊಂಡು ತಿಂದು ಸರಸಸಲ್ಲಾಪದಲ್ಲಿ ಇರುತ್ತಿದ್ದರೆಂದು ಅವರ ಜೊತೆಗಾರರೇ ಈಚೆಗೆ ನನಗೆ ತಿಳಿಸಿದ್ದರು. ಆಗ ಮದರಾಸಿನಲ್ಲಿ ಉಪಹಾರಮಂದಿರಗಳಿಗೆ ಕೊರತೆ ಯೇನು ಇರಲಿಲ್ಲ. ಆ ವೇಳೆಯಲ್ಲಿ 'ಶ್ರೀ'ಯುವರ ಬೆರಳು ಒಂದು ಪುಸ್ತಕದ ಮಧ್ಯೆ ಸಿಕ್ಕಿಗೊಂಡಿತ್ತಂತೆ ! ಅವರು ಹೆಚ್ಚು ಪುಸ್ತಕ ತಿನ್ನುವ 'ಜಂತು'ವಾಗಿ ದ್ದುದ್ದನ್ನೇನೋ ನಾನು ಬಲ್ಲೆ. ಪುಸ್ತಕ ಹಿಡಿದು ಕೂತರೆ ಊಟಕ್ಕೆ ಏಳು ವುದೇ ಕಷ್ಟವಾಗಿತ್ತು. ಯಾರಾದರೂ ಕಾಣಲು ಬಂದರೆ ಬಾಗಿಲು ತೆರೆಯು ವುದು ಅಷ್ಟೇ : ಒಂದು ದಿನ ಅವರ ಶಿಷ್ಯರೊಬ್ಬರು ಹೊಸದಾಗಿ ಎಂ.ಎ. ತೇರ್ಗಡೆ ಹೊಂದಿ ತಮ್ಮ ಗುರುಗಳ ಆಶೀರ್ವಾದ, ಬುದ್ಧಿವಾದಕ್ಕಾಗಿ ಬಂದು ಒಂದರ್ಧ ತಾಸು ಕಾದು ಒಳಹೋದಾಗ 'ನನ್ನಂತೆಯೇ ನೀವು ಈಗ ಒಬ್ಬ ಎಂ.ಎ. ನಾನು ನಿಮಗೆ ಏನುತಾನೇ ಹೇಳಲಿ' ಎಂದರು ! ಶಿಷ್ಯರು ನಾಚಿ ಕೊಂಡು ಅವಾಕ್ಕಾಗಿಬಿಟ್ಟರು. ವೃಥಾ ಕಾಲಕಳೆಯದೆ ಪುಸ್ತಕಗಳನ್ನು ಹೆಚ್ಚು ಓದಿ ಅಂತಲಾದರೂ ಅನ್ನಬಾರದಾಗಿತ್ತೆ ? ಹೇಗಿದ್ದರೂ ಮುಂದೆ ಆತ ಒಂದ

ನಗರದ ಬೃಹತ್ ಗ್ರಂಥಾಲಯದ ಮುಖ್ಯಾಧಿಕಾರಿಗಳಾಗುವವರಿದ್ದರು. ಆ ಚೋದ್ಯವೇತಕ್ಕೆ? ಅದೇ ಸುಮಾರಿನಲ್ಲಿ ಒಂದು ದಿನ ನಾನು ಏನೋ ಚಿಂತಿಸುತ್ತಿದ್ದಾಗ ನಮ್ಮಣ್ಣ ನನ್ನ ಬಳಿಗೆ ಬಂದು ಏಕೆ ಚಿಂತನೆ? ಷೇಕ್ಸ್‌ಪಿಯರ್ ಓದು, ಬೈಬಲಿನ ಹೊಸ ಭಾಗ (New Testament) ಓದು, ನೀನು ಲಘುವಾಗುತ್ತೀ, ನಿನಗೆ ಪ್ರಪಂಚ ಜ್ಞಾನ ಬರುತ್ತೆ, ನಿನ್ನ ಇಂಗ್ಲಿಷ್ ಭಾಷೆಯೂ ಬೆಳೆಯುತ್ತೆ ಎಂದರು. ಇಂತಹವರು ಮುಂದೆ ಕನ್ನಡ ಭಾಷೆಯ ಬೆಳಕುಗಾರರಾದರು! ನನ್ನನ್ನು ಕನ್ನಡ ಭಾಷಣಗಳಿಗೂ, ಬರವಣಿಗೆಗಳಿಗೂ ಪ್ರಚೋದಿಸಿದರು! ಇಂಗ್ಲಿಷ್‌ನ ಪ್ರತಿಭೆ, ಕನ್ನಡದ ಪ್ರೀತಿ, ಎರಡೂ ಅವರಲ್ಲಿ ಕೂಡಿತ್ತು.

ನಾನು ಪ್ರೌಢಶಾಲೆಗೆ ಸೇರಿದಾಗ ಅಣ್ಣನವರು ಆಗತಾನೆ ೧೫೦ ರೂ.ನ ಕಾಲೇಜಿನ ಸಣ್ಣದ ಬೋಧಕರಾಗಿದ್ದಾಗ ನಾನು ಕೊಳ್ಳಬೇಕಾಗಿದ್ದ ೧೦೦ರೂ ಮೇಲ್ಪಟ್ಟ ಪುಸ್ತಕಗಳನ್ನು ಆದಷ್ಟು ಕಡಿಮೆ ಮಾಡಿಕೊಳ್ಳಲು ಹೇಳಿದ್ದರು. ಏಕೆ, ಪುಸ್ತಕಗಳ ಮೇಲಿನ ಅಭಿಮಾನ ಆಗ ಅವರಿಗೆ ಇರಲಿಲ್ಲವೇ?

ಅಣ್ಣಯ್ಯ ಒಮ್ಮೆ ನನಗೆ ಬೋಧಿಸಲು ಬಂದು ಮಗು ಮನುಷ್ಯನ ಅಪ್ಪ ಬಲ್ಲೆಯಾ? ಅಂದರು. ನಾ ಬಲ್ಲೆ, ಅದು ದೊಡ್ಡದಾದ ಮೇಲೆ ಎಂದೆ. ಅಲ್ಲ ಕಣೋ ಅದು ಚಿಕ್ಕಂದಿನಲ್ಲಿಯೇ ಅಪ್ಪ ಆಗಿದೆ, ಎಂದು ಒಂದು ಇಂಗ್ಲಿಷ್ ಪದ್ಯದ ಒಳರ್ಥವನ್ನು ಹೇಳಿದ್ದರು. ಮಹಾರಾಜ ಕಾಲೇಜಿನ ನಾಟಕ ರಂಗದ ಮೇಲೆ ಆಗಿನ ಮಹಾರಾಜರ ಮುಂದೆ ಪ್ರಿನ್ಸಿಪಾಲ್ ಹೆನ್ ಹ್ಯಾಮರ ತರಬೇತಿನಲ್ಲಿ ನಾನು ಪಾತ್ರ ವಹಿಸುತ್ತಿದ್ದ ಷೇಕ್ಸ್‌ಪಿಯರ್ ನಾಟಕಗಳನ್ನು ನಗು ನಗುತ್ತಾ ನೋಡುತ್ತಿದ್ದವರು ಮನೆಗೆ ಬಂದಮೇಲೆ ತಾವು ಏನೂ ಕಾಣದವರಂತೆ ಓಡಾಡುತ್ತಿದ್ದರು — ನನ್ನ ಪಾತ್ರ ಚನ್ನಾಗಿತ್ತೆನ್ನಬಾರದಾಗಿತ್ತೆ? ಮಹಾರಾಜರು ನನ್ನ ಪಾತ್ರ ಮೆಚ್ಚಿ ನನಗೆ ಕೊಟ್ಟಿದ್ದ ಷೇಕ್ಸ್‌ಪಿಯರ್ ಪುಸ್ತಕವನ್ನೇನೋ ನೋಡಿ ಚನ್ನಾಗಿದೆ ಅಂದರು. ಆದರೆ ಅದನ್ನು ಪಡೆದು ಕೊಂಡವನ ಪಾತ್ರ?

ಒಂದು ಸಲ 'ಶ್ರೀ'ಯವರು ಗಾಂಧೀಜಿ ಹೇಳಿಕೆ ಬಗ್ಗೆ ತಮ್ಮ ವಿದ್ಯಾರ್ಥಿಗಳ ಮುಂದೆ ಟೀಕಿಸಿ ಅದು ಶಿಸ್ತಿನ ಆದರ್ಶವಲ್ಲವೆಂದಿದ್ದರು. ಸರಿ, ತಾತಯ್ಯನವರ ಪೇಪರ್‌ಗಳು 'ಶ್ರೀ'ಯವರನ್ನು ಟೀಕಿಸಿದವು— ಅವರು ಬ್ರಿಟಿಷರ ಪರ, ಅವರೇ ಪೈಸ್ರಾಯಿರಾಗಲಿ! ಎಂದರು. ಇದಕ್ಕೆ ಎದುರುತ್ತರಕ್ಕೆ ಅವರಿವರಿಂದ ಒತ್ತಾಯ ಬಂತು. ಬೇಕಿಲ್ಲ, ಮೌನವೇ ಸಾಕು ಎಂದುಬಿಟ್ಟರು— ಏನೂ ಆಗಲಿಲ್ಲ! ಗಾಂಧೀಜಿ ತಾನು ಸಿನಿಮಾ ನೋಡಲ್ಲ, ಬೇಕಿಲ್ಲ ಎಂದಿದ್ದರು.

ಅದಕ್ಕೆ ನಾನು ಒಮ್ಮೆ ಸಿನಿಮಾ ಮಾಸಪತ್ರಿಕೆಯೊಂದರಲ್ಲಿ ಅವರೇಕೆ ನೋಡ ಬಾರದು, ನೋಡಿ ಹೇಳಬಾರದೆ? ಎಂದು ಟೀಕಿಸಿದ್ದೆ. 'ಶ್ರೀ'ಯವರು ನನ್ನ ಟೀಕೆ ನೋಡಿ ಸರಿ, ಹಾಗೆ ಧೈರ್ಯವಾಗಿ ಬರಿ ಎಂದಿದ್ದರು. ಈಚೆಗೆ ಅವರ ಮೇಲೆ ಅವರಎದುರೇ, ಪರಿಷತ್ತಿನಲ್ಲಿ ಭಾಷಣದಲ್ಲಿ ನಾನು ಅವರ ಕರ್ನಾಟಕ ಲಿಪಿ ಸಂಸ್ಕರಣವನ್ನು ಯಾಂತ್ರಿಕಾನುಕೂಲಕ್ಕಾಗಿ ಮಾಡುತ್ತಿರುವುದು ಅನು ಚಿತ ಎಂದಿದ್ದೆ—ಅದು ಕೊನೆಗೂ ವಿಫಲವೇ ಆಗಿಬಿಟ್ಟಿತು! ಗಾಂಧೀಜಿ ಟೀಕೆ ಎತ್ತಿ ಮತ್ತೆ ಒಮ್ಮೆ ೧೯೩೫ರಲ್ಲಿ ನಾನು ಮಹಾತ್ಮರ ಜತೆ ಬದನ್‌ವಾಳ್ ನಲ್ಲಿದ್ದಾಗ ಆದ ಒಂದು ಪ್ರಸಂಗ ಹೇಳಲಿಚ್ಛಿಸುತ್ತೇನೆ. ಆಗ ಒಬ್ಬ ಹುಡುಗ ಹಸ್ತಾಕ್ಷರಕ್ಕಾಗಿ ಗಾಂಧೀಜಿಗೆ ಅರ್ಧ ರೂಪಾಯಿ ಕೊಟ್ಟ, ಆಗುವುದಿಲ್ಲ ಒಂದು ರೂಪಾಯಿ ಕೊಡಬೇಕೆಂದು ಹೇಳಿ, ಅದನ್ನು ಹರಿಜನರ ಫಂಡಿಗೆ ಇರಲಿ ಎಂದು ತಮ್ಮ ಮುಂದಿನ ಗೋಲಕಕ್ಕೆ ಹಾಕಿಕೊಂಡುಬಿಟ್ಟರು. ಹುಡುಗನಿಗೆ ಹಸ್ತಾಕ್ಷರವೂ ಸಿಕ್ಕಲಿಲ್ಲ. ಅವ ಪೆಚ್ಚಾದ. ನಂತರ ನಾನು ಇದನ್ನು ಗಾಂಧೀಜಿಗೆ ತಿಳಿಸಿದ್ದೆ. ಇದು ಸರಿಯೇ ಎಂದು ಕೇಳಿದ್ದೆ. ಬಹಳ ತಡೆದು ಗಾಂಧೀಜಿ ಅದು ಸಣ್ಣ ವಿಷಯ ಅಲ್ಲಿಗೆ ಬಿಡಿ ಎಂದರು. ಸಣ್ಣ ವಿಷಯ ದಲ್ಲಿಯೂ ಧರ್ಮನೀತಿ ಇಲ್ಲವೇ ಎಂದು ಅದು ಈಗಲೂ ನನ್ನನ್ನು ಬಾಧಿಸು ತ್ತಿದೆ!

ಅಖಿಲ ಕೊಡಗು ಶಿಕ್ಷಕರ ಸಮ್ಮೇಳನ ಒಮ್ಮೆ ನಾಪೊಕ್ಲುನಲ್ಲಿ ನಡೆಯಿತು. 'ಶ್ರೀ'ಯವರ ಅಧ್ಯಕ್ಷತೆಯಲ್ಲಿ, ಶಿವರಾಮಕಾರಂತರು ಅದರ ಪ್ರದರ್ಶನ ತೆರೆದರು, ಆಗ್ಗೆ ನಾನೊಬ್ಬ ಆಹ್ವಾನಿತ ಉಪನ್ಯಾಸಕ. ಅಧ್ಯಕ್ಷರ ಆರಂಭ ಭಾಷಣ ನಿರರ್ಗಳವಾಗಿ ಎರಡು ತಾಸುಗಳ ಕಾಲ ವಾಗ್ಝರಿಯಿಂದ ವಿಶ್ವವಿದ್ಯಾನಿಲಯವನ್ನು ಗುಡಿಸಲ ಬಾಗಿಲಿಗೇ ಕೊಂಡೊಯ್ಯುವುದನ್ನು ಸಹಸ್ರಾರು ಸಭಿಕರು ಬೆಪ್ಪಾಗಿ ನಿಂತು ಕೇಳಿದರು. ಅರ್ಥಮಾಡಿಕೊಂಡವರು ಶ್ರೀಯವರ ೩೦ ಮಂದಿ ಶಿಷ್ಯರು! ನಂತರ ಕಾರಂತರು ಎರಡೇ ಮಾತಿನಲ್ಲೇ ಪ್ರದರ್ಶನವನ್ನು ಎತ್ತಿಬಿಟ್ಟು ಚಿಟಿಕೆ ಹಾಕಿಬಿಟ್ಟರು. ಚಪ್ಪಾಳೆ ಸುರಿಮಳೆ ಯಾಯಿತು. ಆ ಸಾಯಂಕಾಲ ನಾನು ಕತ್ತಲಲ್ಲಿ ನಿಂತು ಮಾಯಾದೀಪ ದಿಂದ ಚಿತ್ರ ತೋರಿಸುತ್ತಾ "ಜ್ವಾಲಾಮುಖಿಗಳು ಭೂಕಂಪಗಳು" ವಿಚಾರ ಉಪನ್ಯಾಸ ಮಾಡಿದೆ. ಎಲ್ಲರಿಗೂ ಹಿಡಿಸಿತು. ಎಲ್ಲರ ಕೋರಿಕೆಯಂತೆ ಕೊನೆ ಯಲ್ಲಿ ಎರಡು ದೀಪಗಳ ಮಧ್ಯೆ ನನ್ನನ್ನು ನಿಲ್ಲಿಸಿಕೊಂಡು ನೋಡಿ ತೃಪ್ತರಾದರು ಸರಿ. ಮಾರನೇ ದಿನ ಅಲ್ಲಿಯ ಹೆಡ್‌ಮಾಸ್ತರು ನಂಜಪ್ಪನವರು ನನ್ನದೊಂದು

ಭಾಷಣ ಮಾಡುವಂತೆ ಮತ್ತೆ ಕೇಳಿದರು. ಶ್ರೀಯವರು ನನಗೆ ಅವಕಾಶ ಕೊಡುವ ಬಗ್ಗೆ ಆಕ್ಷೇಪಿಸುತ್ತಾ ಕೊನೆಗೆ ನನ್ನನ್ನು ಕೇಳಿ ನಾನು ಬಹುದೆನ್ನಲು ಅನುಮತಿ ಕೊಟ್ಟರು. ಅದನ್ನು ತಮ್ಮ ಮುಕ್ತಿಯ ಭಾಷಣಕ್ಕೆ ಹಿಂದೆ ಇಟ್ಟರು. "ವಿಜ್ಞಾನವೆಂದರೇನು?" ಎಂಬ ವಿಷಯ ಮಾತನಾಡಿ ಕೆಲವು ಪ್ರಯೋಗಗಳನ್ನು ಮಾಡಿ ತೋರಿಸಿದೆ. ಅದನ್ನು ಆಗ ನಾಟಕಶಾಲೆ ಚಪ್ಪರದಲ್ಲಿ ಜನ ಕಿಕ್ಕಿರಿದು ನಿಂತು ಕೇಳಿದರು. ನನ್ನದು ಮುಗಿದೊಡನೆಯೇ 'ಶ್ರೀ'ಯವರು ತಮ್ಮ ಇತಿಶ್ರೀ ಭಾಷಣಕ್ಕೆ ಎದ್ದರು. ಸಭೆಯವರು ಮುಕ್ಕಾಲು ಭಾಗ ಹೊರ ಹೊರಟರು. 'ಕೂಡ್‌ಂಡ್ರಾ' ಎಂದು ಸಮ್ಮೇಳನಕರ್ತರು ಕೂಗುತ್ತಿದ್ದರೂ 'ಬರ್ತೆವ್ರೂ' ಎಂದು ಜನ ಹೊರಟೇಬಿಟ್ಟರು. ಸಭಾ ತೆಳ್ಳ ಗಾಯಿತು!

'ಶ್ರೀ'ಯವರು ಉಳಿದ ಸಭಿಕರಿಗೆ ತಮ್ಮ ಭಾಷಣ ಮಾಡಿ ಗಂಭೀರವಾಗಿ ಅದಕ್ಕೆ ಒಂದು ಪೂರೈಕೆ ಕೊಟ್ಟರು. ವಂದನಾರ್ಪಣೆಗೆ ಹಾರಾದಿಗಳು ಆದವು. ನಂತರ ನಾವು ಎಲ್ಲರೂ ಅಲ್ಲಿನ ಕಾವೇರಿ ಮೇಲ್‌ದಂಡೆಯ ಸಂಚಾರಿ ವಿಶ್ರಾಂತಿ ಗೃಹದಲ್ಲಿ ಏರ್ಪಡಿಸಿದ್ದ ಉಪಹಾರಕ್ಕೆ ಸೇರಿದೆವು. ಅಲ್ಲಿ ಕಾರಂತರು ಸುಮ್ಮ ನಿರದೆ 'ಶ್ರೀ'ಯವರನ್ನು ಚಿಮುಕಿದರು:—ನಿಮ್ಮ ತಮ್ಮ ಈ ದಿನ ನಿಮಗೆ ಒಂದು ಭಾರಿ ಬೇಸ್ತುಕೊಟ್ಟರು ಎಂದರು. ಅದಕ್ಕೆ 'ಶ್ರೀ'ಯವರು ಹೌದು, ಅವನ ಯೋಗ್ಯತೆ ತಿಳಿದಂತಾಯಿತು, ಇನ್ನೊಂದು ಸಲ ನಾವಿಬ್ಬರೂ ಸೇರಿದಾಗ ಏನುಮಾಡಬೇಕೆಂಬುವನ್ನು ನಾ ಬಲ್ಲೆ. ಅವನ ಭಾಷಣವನ್ನು ಕೊನೆಗೆ ಇಟ್ಟು ಬಿಡುತ್ತೇನೆ ಎಂದರು. ಅಂತು, ಈ ಪ್ರಸಂಗ ನನಗೆ ಅಷ್ಟು ಹಿತವಾಗಿರಲಿಲ್ಲ, ಬರುತ್ತಾ ದಾರಿಯಲ್ಲಿ ಅವರು ನಿನ್ನ ಭಾಷಣಗಳನ್ನು ಅಲ್ಲಿಗೇ ಬಿಡಬೇಡ. ಒಂದು ಪುಸ್ತಕ ಮಾಡಿ ಅಚ್ಚು ಹಾಕಿಸು ಎಂದು ನನಗೆ ಹೇಳಿದರು. ಪರಿಣಾಮ—'ಶ್ರೀ'ಯವರಿಗೆ ಅರ್ಪಿತವಾಗಿರುವ ನನ್ನ "ವಿವಿಧ ಜನಪ್ರಿಯ ವಿಜ್ಞಾನ ಸಂಪುಟಗಳು."

ಉತ್ತಮ ಪ್ರಾಧ್ಯಾಪಕರೊಬ್ಬರು ತಮ್ಮ ವಿಶ್ವವಿದ್ಯಾನಿಲಯ ಜ್ಞಾನವನ್ನು ಗುಡಿಸಲು ಬಳಿಗೆ ಕೊಂಡೊಯ್ದಿದ್ದು ಒಂದು ಕಡೆ ಆದರೆ, ಇನ್ನೊಂದು ಕಡೆ ಹಿಂದೆ ಅದೇ ಉನ್ನತರು ಎಸ್.ಎಸ್.ಎಲ್.ಸಿ.ಗೆ, ಇಂಗ್ಲಿಷ್ ಪರೀಕ್ಷಕರಾಗಿ ನೇಮಿತರಾಗಿ ಅದರಲ್ಲಿ ಸಿಕ್ಕಿದ ಬಾಲಕಬಾಲಕಿಯರ ಉತ್ತರಗಳಿಗೆ ಅಂಕ ಗಳನ್ನು ಕೊಡುವಾಗ ೧೦–೫ ಇವಕ್ಕೆ $\frac{1}{2}$, ೧$\frac{1}{4}$ ಎಂತಲೂ ದೊರಕಿತ್ತು. 'ಶ್ರೀ' ಯವರು ಒಳ್ಳೆ ಬೋಧಕರು, ಆದರೆ ಕೆಟ್ಟ ಪರೀಕ್ಷಕರು ಎಂದು ಹೆಸರು ಪಡೆ

ದಿದ್ದರು. ಅವರು ಅಂಕ ಕೊಟ್ಟಿದ್ದ ಒಂದು ಕಂತೆ ಉತ್ತರಪತ್ರಿಕೆಗಳು ಪರೀಕ್ಷಾಮಂಡಲಿಯಿಂದ ಧಾರಾಳತೆಯಿಂದ ಪುನಃ ಪರಿಶೀಲಿಸಬೇಕೆಂದು ಹಿಂದಕ್ಕೆ ಬಂದಿದ್ದವು. ಅವನ್ನು ಅಣ್ಣಯ್ಯ ಕಾಲೇಜಿನಲ್ಲಿ ಓದುತ್ತಿದ್ದ ನನಗೆ (ಬೇಸಿಗೆ ರಜೆಕಾಲ) ನೋಡು ಸರಿಯಾಗಿಲ್ಲವೆ, ಎಂದು ಕೊಟ್ಟರು. ನಾನು ನೋಡಿ ಅವರು ಕೊಟ್ಟಿದ್ದ ಅಂಕಗಳಿಗೆ ೪–೫ರಷ್ಟು ಹೆಚ್ಚು ಕೊಟ್ಟು ತೋರಿಸಿದೆ. ಅಂಕಗಳು ಅಷ್ಟು ಬಿಟ್ಟಿ ಬಿಸಾಡಿಹೋಗಿದೆಯೇನೋ ಎಂದರು. ಅದಕ್ಕೆ ನಾನು ಧೈರ್ಯವಾಗಿ ನಿನ್ನನ್ನು ಇದಕ್ಕೆ ಪರೀಕ್ಷಕರನ್ನಾಗಿ ಮಾಡಿದ್ದೇ ತಪ್ಪು-ಅದನ್ನು ನೀನು ಒಪ್ಪಿಕೊಂಡದ್ದೂ ತಪ್ಪು ಎಂದುಬಿಟ್ಟೆ. ಒಮ್ಮೆ ನಾನು ಮನ ಬಿಚ್ಚಿ ಆಡುವನೆಂದು ಅವರಿಗೆ ಗೊತ್ತಿತ್ತು. ಪತ್ರಿಕೆಗಳೆಲ್ಲಕ್ಕೂ ಹೆಚ್ಚು ಕಡಿಮೆ ನಾನು ಕೊಟ್ಟ ಅಂಕಗಳನ್ನೇ ಕೊಟ್ಟು ಮರಳಿಸಿದರು. ಮುಂದೆ ಅವರು ಮತ್ತೆ ಎಸ್.ಎಸ್.ಎಲ್.ಸಿ. ಪರೀಕ್ಷಕರಾಗಲಿಲ್ಲ—ಹುಡುಗರೂ ಬದುಕಿದರು!

ನಮ್ಮ ತಂದೆ ಗತಿಸಿದ ಕೆಲವು ವರ್ಷಗಳ ನಂತರ ನಾವು ಶ್ರೀರಂಗಪಟ್ಟಣದಲ್ಲಿ ಸೇರಿ ಪಾಲಾದೆವು. ಅಣ್ಣಯ್ಯ ತಾವು ಏನೂ ಪಾಲನ್ನು ತೆಗೆದುಕೊಳ್ಳದೆ ಎಲ್ಲ ವನ್ನು ನಮ್ಮಿಬ್ಬರಿಗೆ ಬಿಟ್ಟು ಹಾಗೇಯೇ ಸಹಿ ಹಾಕಿದರು. ಈ ಔದಾರ್ಯ ಅಲ್ಲಿಗೇ ನಿಲ್ಲಲಿಲ್ಲ. ನಂಜನಗೂಡಿನಲ್ಲಿರುವ ನನ್ನ ಮನೆಯನ್ನು ನಾನು ಸಹಕಾರ ನಿಧಿಯಿಂದ ಸಾಲ ಪಡೆದು ಹಾಗೂ ಹೀಗೂ ಕಟ್ಟಿಸಿದ್ದೆ. ಅಣ್ಣಯ್ಯ ಆಮೇಲೆ ಅಲ್ಲಿಗೆ ಬಂದಿದ್ದಾಗ ಅದರ ಸಾಲವೆಲ್ಲಾ ತೀರಿತೆ ಎಂದು ಕೇಳಿದರು. ಇನ್ನೊಂದೇ ಸಾವಿರ ಉಳಿದಿದೆ ಇನ್ನಾರು ತಿಂಗಳಲ್ಲಿ ತೀರುತ್ತೆ ಎಂದೆ. ಬಂದಿದ್ದ ಅವರು, ನಮ್ಮ ಭಾವನವರೂ, ರೈಲಿಗೆ ಹೊರಟರು. ನಾನು ಜತೆಯಲ್ಲಿ ಮೈಸೂರುವರೆಗೆ ಹೊರಟೆ. ರೈಲಿನಲ್ಲಿ ಅವರು ನನ್ನನ್ನು ಕರೆದು ನಿನ್ನ ಬಾಳಿಗೆ ನೀನಾಗಿಯೇ ಶ್ರಮಿಸುತ್ತಿದ್ದೀ ಸಂತೋಷ, ಆದರೂ ಇದನ್ನು ತೆಗೆದುಕೊ, ನಿನ್ನ ಸೈಟನ್ನು ಬಿಡಿಸಿಬಿಡು ಎಂದು ೧೦೦೦ ರೂ.ನ ಚೆಕ್ ಒಂದು ಕೊಟ್ಟರು. ಆ ಸಾಲ ತೀರಿಸಿಬಿಡು ಎಂದರು. ತೀರಿಸಿಬಿಟ್ಟೆ.

ಮೊದಲಿಗೆ ನಾವು ಹುಡುಗರಾಗಿದ್ದಾಗ ಮನೆಗೆ ಅಂಗಡಿಯಿಂದ ಸಾಮಾನು ತರುವಾಗ ಸ್ವಲ್ಪ ತಿಂಡಿ ತಿಂದು ಅದರ ಬೆಲೆಯನ್ನು ಸಾಮಾನಿನೊಳಗೆ ಸೇರಿಸು ತ್ತಿದ್ದೆವು. ಮನೆಗೆ ಬಂದು ಅವರಿಗೆ ಚಿಲ್ರೆ ಕೊಟ್ಟಾಗ ಅವರು ಒಂದು ಸಲ ತಿಂಡಿ ಏನಾದರು ತೆಗೆದುಕೊಳ್ಳಲಿಲ್ಲವೇನೋ, ತೆಗೆದುಕೊಳ್ಳಬೇಕಾಗಿತ್ತು ಎಂದು ನಸುನಗುತ್ತಾ ಹೇಳುತ್ತಿದ್ದರು. ನಾವು ಸುಮ್ಮನಿರುತ್ತಿದ್ದೆವು. ಹುಡುಗರು ಮಾಡುವ ಕೆಲಸ ಅವರಿಗೆ ಹೇಗೆ ಗೊತ್ತು? ಅವರ ಬಾಲ್ಯದ ಅನುಭವವೋ?

'ಶ್ರೀ'ಯವರು ಬಹಳ ಖಂಡಿತ ಮತ್ತು ಸಿಟ್ಟು. ಇದು ಬರುಬರುತ್ತಾ ಕಮ್ಮಿ ಆಯಿತು. ಇದ್ದ ಒಬ್ಬ ಮಗನ ಕಣ್ಣುಗಳು ಒಂದು ವರುಷದ ಮಗುವಿನಲ್ಲಿ ಹಿರೋಡೆ ತೋಟದ ಮನೆಯಲ್ಲಿದ್ದಾಗ ಕಣ್ಣುನೋವು ಬಂದು, ಮನೆಯವರ ಅಜಾಗರೂಕತೆಯಿಂದ ವೈಲ್‌ತುತ್ತವನ್ನು ಕಣ್ಣಿಗೆ ಒತ್ತಿ ತಿಕ್ಕಿದ್ದರಿಂದ ಎರಡೂ ಕಣ್ಣುಗಳು ಬರಬರುತ್ತಾ ಹಾಗೇ ಹೋಗಿಬಿಟ್ಟವು. ಅನಂತರ ನಿಪುಣ ವೈದ್ಯ ಚಿಕಿತ್ಸೆಗಾಗಿ ದಂಪತಿಗಳು ಮಗುವನ್ನು ಮದರಾಸಿಗೆ ಕೊಂಡೊಯ್ದರು. ಆದರೆ ಅಲ್ಲಿಗೆ ಕಾಲ ಮಿಂಚಿಹೋಗಿತ್ತು. ಮಗುವನ್ನು ಹಿಂದಕ್ಕೆ ತೋಟದ ಮನೆಗೆ ಕರೆದುಒಯ್ದಾಗ 'ಶ್ರೀ'ಯವರಕಣ್ಣುಗಳಲ್ಲಿ ನೀರು ಪಳಪಳನೆ ಬಿದ್ದುದನ್ನು ತಮ್ಮ ಕರವಸ್ತ್ರದಲ್ಲಿ ಒರೆಸಿಕೊಂಡದ್ದನ್ನು ನೆನ್ನೆ ನೋಡಿದಂತೆ ಈಗಲೂ ಕಾಣುತ್ತಿದ್ದೇನೆ. ಇದಾದ ಕೆಲವೇ ವರ್ಷಗಳಲ್ಲಿ ಅವರ ಹೆಂಡತಿ ಸಾಕುತ್ತಿದ್ದ ಒಂದು ಹೆಣ್ಣು ಮಗುವನ್ನು ಬಿಟ್ಟು ಹೋಗಿಬಿಟ್ಟರು. ಆಗ ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದವನು ಓಡಿಬಂದು ಅವರ ಮುಂದೆ ಬಿಕ್ಕಿಬಿಕ್ಕಿ ಅತ್ತುಬಿಟ್ಟೆ. ಆಗ ಅಣ್ಣಯ್ಯ ನಗುನಗುತ್ತಾ ನನ್ನನ್ನು ಸಮಾಧಾನಪಡಿಸಿದರು. ಆಗ್ಯೆ ಹೆಂಡತಿಯನ್ನು ಕಳೆದುಕೊಂಡವನು ಅವರಲ್ಲಿ ನಾನೇ ಆದೆ!

ಮನೋಭಾವ, ಸ್ಥೈರ್ಯ, ಶಾಂತತೆ, ಅಷ್ಟರಮಟ್ಟಿಗೆ ಇತ್ತು. ಅಲ್ಲಿಂದೀಚೆಗೆ ಅವರ ಖಂಡಿತ, ಸಿಟ್ಟು, ಎಲ್ಲೋ ಮಾಯವಾಯಿತು-ಶಾಂತ ತತ್ವಜ್ಞತೆಗೆ ಇಳಿದುಬಿಟ್ಟರು.

ಅವರ ಪತ್ನಿವಿಯೋಗವಾದ ಮೇಲೆ, ಅಲ್ಲಿಂದ ಮುಂದೆ ತನ್ನ ಪತಿಯನ್ನು ಕಳೆದುಕೊಂಡಿದ್ದ ಅವರ ಹಿರಿಯ ಮಗಳು ಶಾರದಮ್ಮ ಅವರೊಂದಿಗೆ ಇದ್ದು ಅವರ ಗೃಹಕೃತ್ಯವನ್ನೆಲ್ಲಾ ಬಹಳ ಜಾಣತನದಿಂದ ಬಿಗಿಯಾಗಿ ನೋಡಿಕೊಂಡಿದ್ದು ಅವರಿಗೆ ಅಚ್ಚುಮೆಚ್ಚಾಗಿ ಹಿಂದಿನ ಕಷ್ಟಸುಖಗಳನ್ನೆಲ್ಲಾ ಮರೆಸಿಕೊಂಡಿದ್ದಳು. ಆಗ 'ಶ್ರೀ'ಯವರು ತಮ್ಮ 'ತಪೋ' ಮನೋಧರ್ಮವೋ ಎಂಬಂತೆ ತಮ್ಮ ಬಳಿ ಒಂದು ಜಿಂಕೆಮರಿಯನ್ನು ಸಾಕಿದ್ದರು. ಅದು ರಾತ್ರಿವೇಳೆ ಅವರ ಬಳಿಯೇ ಮಲಗುತ್ತಿತ್ತು. ಅದು ಒಂದು ದಿನ ಅವರ ಕಿರಿ ಮಗಳನ್ನು (ತಂಗಮ್ಮ) ಕೊಂಬಿನಿಂದ ತಿವಿದು ಘಾಯಪಡಿಸಿತ್ತು. ಅದಕ್ಕೆ ಔಷಧೋಪಚಾರವೇನೋ ಆಯಿತು.

'ಶ್ರೀ'ಯವರು ಜಿಂಕೆಮರಿಯನ್ನು ತಮ್ಮ ಬಳಿಗೆ ಸೆಳೆದುಕೊಂಡು ಇನ್ನು ಮೇಲೆ ಹೀಗೆ ಮಾಡಬೇಡ. ಅದು ನಿನ್ನಂತಹ ಸಾಧುಪ್ರಾಣಿಗೆ ಯೋಗ್ಯ

ವಾದುದಲ್ಲ ಎಂದರು. ಆ ವನ್ಯಪ್ರಾಣಿ ತಲೆಯಾಡಿಸಿತು! ತಾನು ಸಾಧು ಪ್ರಾಣಿಯಲ್ಲ ಎಂಬರ್ಥವೋ! ಇರಬಹುದು!

ಕನ್ನಡ ಹಿತಾ ಸಮಾರಂಭಗಳಿಗೆ ತಮ್ಮನ್ನು ಕರೆಸಿಕೊಳ್ಳಲು 'ಶ್ರೀ'ಯವರು ತವಕಪಡುತ್ತಿದ್ದರು, ಅದು ನನಗೆ ಹಿಡಿಸಲಿಲ್ಲ. ನಾವೇ ಮೇಲೆಬಿದ್ದು ಹೋಗ ಬಾರದು ಎನ್ನುತ್ತಿದ್ದೆ. ಇದರ ಅನುಭವ ನನಗೆ ಬೆಂಗಳೂರು, ಧಾರವಾಡ, ಕೊಡಗು, ನಂಜನಗೂಡಿನಲ್ಲಿ ಸಹ ಆಗಿತ್ತು. ಆದರೆ, ಅವರದೇ ಒಂದು ದೃಷ್ಟಿ ಆಗಿತ್ತು.

ಜ್ಞಾಪಕವಿದ್ದಷ್ಟು ವಿಷಯಗಳನ್ನು ಬರೆದಿದ್ದೇನೆ. ಒಂದು ಚೀನಿ ಗಾದೆ ಇದೆ. ಒಳ್ಳೆಯ ಜ್ಞಾಪಕಕ್ಕಿಂತ ಸ್ವಲ್ಪ ಶಾಯಿ ಒಳ್ಳೆಯದು ಎಂದು. ಶಾಯಿ ಯಿಂದ ಧುಮುಕಿ ಕಾಗದದ ಮೇಲೆ ಗುರುತಾಗಿರುವ ಜ್ಞಾಪಕಗಳು 'ಶ್ರೀ' ಯವರ ವ್ಯಕ್ತಿತ್ವವನ್ನು ಸಾಕಷ್ಟು ಚಿತ್ರಿಸುತ್ತವೆ ಎಂದು ನಂಬಿದ್ದೇನೆ.

ಬಿ. ಎಂ. ಶಿವರಾಮಯ್ಯ



ಜೀವನದಲ್ಲಾಗಲಿ, ಸಾವಿನಲ್ಲಾಗಲಿ, ಒಳ್ಳೆಯವನಿಗೆ ಕೆಟ್ಟದ್ದೇನೂ ಆಗ ಲಾರದು.

—ಸಾಕ್ರೆಟೀಸ್

ನಿಮ್ಮ ಹಾದಿಯಲ್ಲಿ ಯಾರು ಮುಳ್ಳು ಚೆಲ್ಲುತ್ತಾರೊ, ಅವರ ಹಾದಿಯಲ್ಲಿ ನೀವು ಹೂವನ್ನು ಹರಡಿರಿ.

—ಕಬೀರ್

# ‘ಶ್ರೀ’ ಸ್ಮರಣೆ

Bliss was it in that down to be a live
But to be young was very heaven !

Wordsworth

ಆ ಉದಯದಲಿ ಬದುಕಿಹುದೆ ಮಹಾಭಾಗ್ಯ
ಜವ್ವನಿಗರಾಗಿರಲು ಸ್ವರ್ಗ ಸೌಭಾಗ್ಯ !

೧

ನಾನು ಬೆಂಗಳೂರಿನ ದೇಶೀಯ ವಿದ್ಯಾ ಪ್ರೌಢಶಾಲೆಯಲ್ಲಿ ಓದುತ್ತಿದ್ದ ದಿನಗಳು ಒಂದು ಪರ್ವಕಾಲವೆನ್ನಿಸಿತ್ತು. ಸಮಗ್ರ ದೇಶದಲ್ಲಿ ರಾಷ್ಟ್ರೀಯ ಚಳುವಳಿ ಎಷ್ಟು ಬಿರುಸಾಗಿ ಸಾಗಿತ್ತೋ, ಕನ್ನಡ ನಾಡಿನಲ್ಲಿ ಆಧುನಿಕ ಕನ್ನಡ ಕ್ಷೇತ್ರದಲ್ಲಿಯೂ ಅಷ್ಟೇ ಪ್ರಭಾವಶಾಲಿಯಾಗಿ ಪುನರುಜ್ಜೀವನವು ಪ್ರಾರಂಭವಾಗಿತ್ತು. ನನಗೆ ಕನ್ನಡ ಪಾಠ ಕಲಿಸುತ್ತಿದ್ದ ಶ್ರೀ ಎ. ಕೆ. ಪುಟ್ಟರಾಮು ಅವರು ಅಂದಿನ ಹೊಸಗನ್ನಡ ಕವಿಗಳಲ್ಲಿ ಒಬ್ಬರಾಗಿದ್ದರು. ಅವರು ರಚಿಸಿದ್ದ "ಹೇಮಾವತಿ-ಹೇಮಗಿರಿ" ಎಂಬ ಪದ್ಯವನ್ನಂತೂ ಎಂದೆಂದಿಗೂ ಮರೆಯುವಂತಿಲ್ಲ. (ಈ ಕವಿತೆ ಮಹಾರಾಜಾ ಕಾಲೇಜಿನ ಕರ್ನಾಟಕ ಸಂಘದವರು ಪ್ರಕಟಿಸಿದ "ತಳಿರು" ಎಂಬ ಕವನ ಸಂಕಲನದಲ್ಲಿದೆ, ೧೯೩೦, ಪು. ೩೮–೪೧. ನನ್ನ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ಕೆ. ಸಂಪದ್ಗಿರಿರಾಯರನ್ನಂತೂ ತಿಳಿಯದ ಕನ್ನಡಿಗನಿಲ್ಲ. ಇಂಥ ಪ್ರತಿಭಾಶಾಲಿಗಳ ಪವಿತ್ರ ಸಾನ್ನಿಧ್ಯದಲ್ಲಿ ವ್ಯಾಸಂಗ ಮಾಡುತ್ತಿದ್ದ ನನಗೆ, ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಅಭಿರುಚಿ ಮೂಡಿದ್ದಷ್ಟೇ ಅಲ್ಲದೆ, ಒಮ್ಮೊಮ್ಮೆ ಸಣ್ಣಪುಟ್ಟ ಕವನಗಳನ್ನು ಬರೆಯಬೇಕೆಂಬ ಹಂಬಲವೂ ಉಂಟಾಗುತ್ತಿತ್ತು.

ನನ್ನಂತೆಯೇ ಸಾಹಿತ್ಯದಲ್ಲಿ ಆಸಕ್ತಿಯಿದ್ದ ಕೆಲವು ಗೆಳೆಯರು ಕೂಡಿ "ಭಾರತ ವೀರ ತರುಣರ ಸಂಘ" ಎಂಬ ಒಂದು ಸಂಘವನ್ನು ಸ್ಥಾಪಿಸಿದೆವು. ಆ ಸಂಘದ ಮುಖವಾಣಿಯಾಗಿರಲೆಂದು ಆಶಿಸಿ "ಭಾರತ ವೀರ" ಎಂಬ ಹಸ್ತಲಿಖಿತ ಪತ್ರಿಕೆಯೊಂದನ್ನು ಮೂರು ತಿಂಗಳಿಗೆ ಒಂದರಂತೆ ಪ್ರಕಟಿಸುತ್ತಿದ್ದೆವು. ಅದನ್ನು ಸಿದ್ಧಪಡಿಸುವ ಹೊಣೆಗಾರಿಕೆಯೆಲ್ಲ ನನ್ನದೇ ಆಗಿತ್ತು. ಅದನ್ನು ಕಂಡ ಎಷ್ಟೋ

ಜನ ಹಿರಿಯರು ಬಾಯಿತುಂಬ ಹೊಗಳಿ ನಮಗೆ ಉತ್ತೇಜನವಿತ್ತರು. ನಾಲ್ಕಾರು ಸಂಚಿಕೆಗಳು ಪ್ರಕಟವಾದ ಅನಂತರ, ಕಲ್ಲಚ್ಚಿನ ನೆರವಿನಿಂದ ಅದರ ಹಲವಾರು ಪತ್ರಿಗಳನ್ನು ಅಣಿ ಮಾಡಿ, ಹೆಚ್ಚು ಹೆಚ್ಚು ಪ್ರಚಾರಕ್ಕೆ ತರಬೇಕು ಎನ್ನಿಸಿತು. ಆ ಸಲುವಾಗಿ ಅನೇಕ ಹಿರಿಯರನ್ನು ಕಂಡು ಧನ ಸಹಾಯವನ್ನು ಕೋರಲು ಅವರು ಉದಾರ ಮನಸ್ಸಿನಿಂದ ಹಣವಿತ್ತು ನಮ್ಮನ್ನು ಹುರಿದುಂಬಿಸಿದರು.

ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ಒಲವಿದ್ದ ನಾನು, ಆಗಿಂದಾಗ್ಗೆ ಬೆಂಗಳೂರಿನ ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ನಡೆಯುತ್ತಿದ್ದ ಕಾರ್ಯಕ್ರಮ ಗಳಿಗೆ ತಪ್ಪದೆ ಹೋಗುತ್ತಿದ್ದೆ. ಆ ದಿನಗಳಲ್ಲಿ ಹೊಸಗನ್ನಡ ಸಾಹಿತ್ಯದ ಪ್ರಮುಖ ಪ್ರವರ್ತಕರಾದ ಬಿ.ಎಂ.ಶ್ರೀ., ಡಿ.ವಿ.ಜಿ., ಮಾಸ್ತಿ, ವಿ.ಸೀ., ಎಂ.ಆರ್.ಶ್ರೀ. ಅವರ ನೇತೃತ್ವದಲ್ಲಿ ಉಪನ್ಯಾಸಗಳು ಏರ್ಪಡುತ್ತಿದ್ದವು. ಬಿ.ಎಂ.ಶ್ರೀ. ಅವರ ಉಪನ್ಯಾಸವೆಂದರೆ, ಜನರು ಕಿಕ್ಕಿರಿದು ಸೇರುತ್ತಿದ್ದರು. ಅವರ ಉತ್ಸಾಹವೂ ಉಕ್ಕಿ ಹರಿಯುತ್ತಿತ್ತು. ಗಂಟೆಗಟ್ಟಲೆ ಮಾತನಾಡಿದರೂ ಒಟ್ಟು ಸಭೆಯೇ ಸದ್ದಿಲ್ಲದೆ ಕುಳಿತಿರುತ್ತಿತ್ತು. ಕನ್ನಡದ ಬಗ್ಗೆ ಅವರಿಗಿದ್ದ ಅಭಿಮಾನವನ್ನು ಕಂಡು ತರುಣನಾದ ನನಗೆ ಮೈಪುಳುಕಗೊಳ್ಳುವಂತಾಗುತ್ತಿತ್ತು.

ಒಮ್ಮೆ ನಾನು ಮತ್ತು ನನ್ನ ಗೆಳೆಯನೊಬ್ಬನು ಕೂಡಿ, ನಾವು ಪ್ರಕಟಿಸು ತ್ತಿದ್ದ 'ಭಾರತವೀರ' ಎಂಬ ಹಸ್ತಲಿಖಿತ ಪತ್ರಿಕೆಯನ್ನು ಬಿ.ಎಂ.ಶ್ರೀ. ಅವರಿಗೆ ತೋರಿಸಿ, ಅವರಿಂದಲೂ ಧನಸಹಾಯವನ್ನು ಕೇಳಬೇಕೆಂದು ನಿರ್ಧರಿಸಿದೆವು. ಆ ಮೇರೆಗೆ, ಬಸವನಗುಡಿಯಲ್ಲಿದ್ದ ಅವರ ಮನೆಗೆ ಹೋದೆವು. ಪ್ರೌಢಶಾಲೆಯ ವಿದ್ಯಾರ್ಥಿಗಳಾದ ನಮ್ಮನ್ನು ಕಂಡು ಅವರಿಗೆ ಕೂಡಲೆ ವಿಸ್ಮಯವಾಯಿತು. ಅನಂತರ, ನಾವು ತೆಗೆದುಕೊಂಡುಹೋಗಿದ್ದ 'ಭಾರತವೀರ' ಎಂಬ ಹಸ್ತಲಿಖಿತ ಪತ್ರಿಕೆಯನ್ನು ಅವರಿಗೆ ತೋರಿಸಿ, ನಾವು ಬಂದಿದ್ದ ಉದ್ದೇಶವನ್ನು ತಿಳಿಸಿದೆವು. ಪತ್ರಿಕೆಯ ಕಡೆಯ ವಿಭಾಗದಲ್ಲಿ ಅನೇಕ ಹಿರಿಯರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದನ್ನು ಕಂಡು ಮೆಚ್ಚಿಕೊಂಡರು. ಮೊತ್ತಮೊದಲನೆಯ ಪುಟ ದಲ್ಲಿಯೇ 'ನವಿಲು' ಎಂಬ ನನ್ನ ಪದ್ಯವೊಂದಿತ್ತು. ಅದನ್ನು ಎರಡು ಮೂರು ಬಾರಿ ಓದಿ, ಆನಂದಿಸಿದರು. ಅನಂತರ ಅದನ್ನು ಬರೆದವನು ನಾನೇ ಎಂದು ತಿಳಿಸಲು ನನ್ನ ಭುಜ ತಟ್ಟಿ "ಪದ್ಯ ತುಂಬ ಚೆನ್ನಾಗಿದೆ. ಹೀಗೆಯೇ ಬರೆಯು ತ್ತಿರಿ" ಎಂದು ಹೊಗಳಿದರು. ಅವರ ಆ ಸವಿನುಡಿಗಳನ್ನು ಕೇಳಿ ನನಗೆ ಅತ್ಯಂತ ಆನಂದವಾಯಿತು. ಅನಂತರ ನಮ್ಮನ್ನು ನಿರುತ್ಸಾಹಗೊಳಿಸದೆ, ತಮ್ಮ

ಕೈಯಲ್ಲಾದಷ್ಟು ಹಣವನ್ನು ಕೊಟ್ಟು ಆಶೀರ್ವದಿಸಿ ಕಳುಹಿಸಿಕೊಟ್ಟರು. ಬಿ.ಎಂ.ಶ್ರೀ. ಅವರನ್ನು ಪ್ರಪ್ರಥಮವಾಗಿ ಕಂಡು ಮಾತನಾಡಿಸಿದ ಆ ಸಂದರ್ಭ ಇಂದಿಗೂ ನನ್ನಲ್ಲಿ ಅಚ್ಚಹಸುರಾಗಿ ಉಳಿದಿದೆ! ಅವರು ಯಾವುದಾದರೂ ಸಭೆಗೆ ಬಂದಿದ್ದಾಗ ಕಂಡುಬರುತ್ತಿದ್ದ ರಾಜಠೀವಿಗೂ, ಮನೆಯಲ್ಲಿ ಇದ್ದಾಗ ತೋರಿಬಂದ ಆ ಸರಳತೆಗೂ ಅಜಗಜಾಂತರ!

ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ನಾನು ಬರೆದ ಎಷ್ಟೋ ಕವಿತೆಗಳು ಅಂದು ಪ್ರಕಟವಾಗುತ್ತಿದ್ದ ಅನೇಕ ಕನ್ನಡ ಪತ್ರಿಕೆಗಳಲ್ಲಿ ಆಗಿಂದಾಗ್ಗೆ ಅಚ್ಚಾಗುತ್ತಿದ್ದವು. ಒಂದೊಂದು ಪದ್ಯ ಅಚ್ಚಾದಂತೆಲ್ಲ ನನಗೆ ಆಗುತ್ತಿದ್ದ ಆನಂದ ಅಷ್ಟಿಷ್ಟಲ್ಲ. ಅನಂತರ ನಾನು ಬೆಂಗಳೂರಿನ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ನನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿದೆ. ಅಲ್ಲಿ ನನಗೆ ವಿ.ಸೀ. ಅವರು ಕನ್ನಡದ ಗುರುಗಳಾಗಿದ್ದರು. ಬಹಳ ಬೇಗನೆ ಅವರ ಪರಿಚಯವಾಯಿತು. ಅವರಲ್ಲಿಗೆ ಹೋಗಿ ನಾನು ಬರೆದ ಕವಿತೆಗಳನ್ನು ತೋರಿಸಿ ಅವರಿಂದ ಸಲಹೆ ಪಡೆಯುತ್ತಿದ್ದೆ. ಆಗ ಅವರು ನೀಡುತ್ತಿದ್ದ ಉತ್ತೇಜನವನ್ನಂತೂ ಹೇಳಿ ಮುಗಿಸುವಂತಿಲ್ಲ. ಬೆಂಗಳೂರಿನ ಅಮೆಚೂರು ನಾಟಕ ಸಂಸ್ಥೆಯವರು ಪ್ರಕಟಿಸುತ್ತಿದ್ದ 'ರಂಗಭೂಮಿ' ಎಂಬ ಪತ್ರಿಕೆಯ ಸಂಪಾದಕರಾಗಿದ್ದ ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳನ್ನು ಇಲ್ಲಿ ನಾನು ನೆನೆಯದಿರಲಾರೆ. ಅವರು ನಾನು ಬರೆದುಕೊಟ್ಟ ಸಣ್ಣಕತೆ ಮತ್ತು ಕವಿತೆಗಳನ್ನು ತಮ್ಮ ಪತ್ರಿಕೆಯಲ್ಲಿ ತಪ್ಪದೆ ಪ್ರಕಟಿಸುತ್ತಿದ್ದರು. ಆಗ ನಾನು ಬರೆದ 'ಪ್ರೇಮ ಬಂಧನ' ಎಂಬ ಸರಳ ರಗಳೆಯ ನಾಟಕವೊಂದನ್ನು ಅವರು ಭಾಗಶಃ ಪ್ರಕಟಿಸಿದ್ದಲ್ಲದೆ, ಅದರ ಹಲವಾರು ಮೇಲಚ್ಚುಗಳನ್ನೂ ಕೊಟ್ಟು ಉಪಕರಿಸಿದರು. ಅದರ ಪ್ರತಿಯೊಂದನ್ನು ಬಿ.ಎಂ.ಶ್ರೀ. ಅವರಿಗೆ ಕೊಡಬೇಕು ಎನ್ನಿಸಿತು. ಯುಗಾದಿಯ ಹಬ್ಬದ ದಿನ ಬೆಳಗ್ಗೆ ಅವರನ್ನು ಕಾಣಲು ಹೋದೆ. ನಾನು ಹೋಗುವ ವೇಳೆಗಾಗಲೇ ವಿಶ್ವವಿದ್ಯಾನಿಲಯದ ಉಪ ಪ್ರಾಧ್ಯಾಪಕರೊಬ್ಬರು ಅವರನ್ನು ಕಾಣಲು ಬಂದಿದ್ದರು. ನನಗೆ ಅವರನ್ನು ಕಾಣಲು ಅವಕಾಶ ಸಿಗುವುದೋ ಇಲ್ಲವೋ ಎಂದು ಶಂಕೆಯಾಯಿತು. ಸ್ವಲ್ಪ ಹೊತ್ತಾದ ಬಳಿಕ, ಬಿ.ಎಂ.ಶ್ರೀ. ಅವರು ತಮ್ಮ ವ್ಯಾಸಂಗದ ಕೊಠಡಿಯಿಂದ ಹೊರಗೆ ಬಂದು ನಮ್ಮಿಬ್ಬರನ್ನೂ ಕಂಡರು. ಮೊದಲು ನನ್ನನ್ನೇ ಒಳಗೆ ಬರಮಾಡಿಕೊಂಡರು. ನಾನು ಅವರಿಗಾಗಿ ತಂದಿದ್ದ "ಪ್ರೇಮ ಬಂಧನ" ದ ಮೇಲಚ್ಚಿನ ಪ್ರತಿಯನ್ನು ಕೊಟ್ಟು ನಮಸ್ಕರಿಸಿದೆ. ಅವರು ಆ ಕೂಡಲೇ "ಇದು ರಂಗಭೂಮಿ" ಮಾಸಪತ್ರಿಕೆಯಲ್ಲಿ

ಭಾಗಶಃ ಅಚ್ಚಾಗಿತ್ತು ಅಲ್ಲವೆ? ಇದನ್ನು ಈ ಮೊದಲೇ ಓದಿದ್ದೇನೆ. ಯಾರೋ ದೊಡ್ಡವರು ಬರೆದಿರಬೇಕೆಂದಿದ್ದೆ. ನಿಮ್ಮಂತಹ ಹುಡುಗರು ಹೀಗೆ ಬರೆದಿರುವುದನ್ನು ಕಂಡು ಬಹಳ ಸಂತೋಷವಾಯಿತು. ಇದೇ ರೀತಿ ಮುಂದೆಯೂ ಬರೆಯಿರಿ” ಎಂದು ನಾಲ್ಕು ಮಾತುಗಳನ್ನು ಆಡಿ ನನ್ನನ್ನು ಹುರಿದುಂಬಿಸಿ ಕಳುಹಿಸಿದರು. ಆ ಯುಗಾದಿಯ ಪ್ರಾತಃಕಾಲದ ಅಂದಿನ ಸವಿನೆನಪನ್ನು ಇಂದಿಗೂ ನೆನೆದು ಮೈಲಕು ಹಾಕುವಂತಿದೆ!

ನಾನು ಕಾಲೇಜಿನಲ್ಲಿ ವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡುತ್ತಿದ್ದುದರಿಂದ, ಕನ್ನಡದಲ್ಲಿ ವಿಶೇಷ ಅಧ್ಯಯನವನ್ನು ನಡೆಸಲು ಅವಕಾಶವಿರಲಿಲ್ಲ. ಆ ಕೊರತೆಯನ್ನು ಹೋಗಲಾಡಿಸಿಕೊಳ್ಳಲೋ ಎಂಬಂತೆ, ಸಾಹಿತ್ಯ ಪರಿಷತ್ತಿನಲ್ಲಿ ಪ್ರತಿ ಭಾನುವಾರವೂ ವ್ಯಾಸಂಗಗೋಷ್ಠಿ ನಡೆಯುವುದಾಗಿ ತಿಳಿದುಬಂದ ಕೂಡಲೆ ನನಗೆ ಪರಮಾನಂದವಾಯಿತು. ದೊಡ್ಡ ದೊಡ್ಡ ವಿದ್ವಾಂಸರು, ಯಾವುದಾದರೊಂದು ಮಹಾಕವಿಯ ಕಾವ್ಯವನ್ನು ಕುರಿತು ನಾಲ್ಕಾರು ಉಪನ್ಯಾಸಗಳಲ್ಲಿ ಪರಿಚಯ ಮಾಡಿಕೊಡುತ್ತಿದ್ದರು. ನನಗೆ ನೆನಪಿರುವ ಮಟ್ಟಿಗೆ ಮೊತ್ತಮೊದಲನೆಯದಾಗಿ ಬಿ.ಎಂ.ಶ್ರೀ. ಅವರು “ಪಂಪರಾಮಾಯಣ”ವನ್ನು ಕುರಿತು ಅನೇಕ ಭಾಷಣಗಳನ್ನು ನೀಡಿದರು. ಆ ಚಂಪೂ ಕಾವ್ಯದ ಸೌಂದರ್ಯವನ್ನು ಸಮಾಲೋಚಿಸುವಲ್ಲಿ ಅದರಲ್ಲಿ ನಿರೂಪಿತವಾಗಿರುವ “ದುರಂತ ರಾವಣ”ನ ಪಾತ್ರವನ್ನು ಕುರಿತು ಅವರು ಪ್ರತಿಪಾದಿಸಿದ ಆ ನೂತನ ದೃಷ್ಟಿಯ ಸ್ವಾರಸ್ಯವನ್ನು ಹೇಳತೀರದು. ತಮ್ಮ ಉಪನ್ಯಾಸಮಾಲೆಯ ಕಡೆಯ ದಿನ, ಎರಡು–ಮೂರು ಗಂಟೆಗಳ ಕಾಲ ಅವಿಶ್ರಾಂತವಾಗಿ ಮಾತನಾಡಿದರು. ಅನಂತರ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಪ್ರಸನ್ನವದನರಾಗಿ ಮುಗುಳ್ನಗೆ ಬೀರುತ್ತ “ನನ್ನ ಉಪನ್ಯಾಸದಿಂದ ನೀವೆಲ್ಲರೂ ತುಂಬ ಬಳಲಿರಬೇಕು. ಅದಕ್ಕಾಗಿ ಇಂದು ನಿಮಗೆಲ್ಲ ಹಣ್ಣು ಹಂಚಲು ನಿಶ್ಚಯಿಸಿದ್ದೇನೆ” ಎಂದು ಹೇಳಿ ಪ್ರತಿಯೊಬ್ಬರಿಗೂ ಸೊಗಸಾದ ಕಿತ್ತಳೆ ಹಣ್ಣನ್ನು ಕೊಟ್ಟರು. ಬಿ.ಎಂ.ಶ್ರೀ. ಅವರ ಮೂಲಕ ಚಂಪೂ ಕಾವ್ಯದ ಸವಿಯನ್ನು ಅರಿತ ಬಳಿಕ ಕಾಲೇಜಿನಲ್ಲಿ ವ್ಯಾಸಂಗ ಮಾಡಲು ವಿಜ್ಞಾನವನ್ನು ಐಚ್ಛಿಕವಾಗಿ ಆರಿಸಿಕೊಂಡಿದ್ದಕ್ಕಾಗಿ ಬಹಳ ನೊಂದುಕೊಂಡೆ. ಈ ವ್ಯಾಸಂಗಗೋಷ್ಠಿಗಳಿಗೆ ವಿದ್ಯಾರ್ಥಿಗಳು ಮಾತ್ರವಲ್ಲದೆ, ಎಷ್ಟೋ ಜನ ಹಿರಿಯ ವಿದ್ವಾಂಸರೂ ಬರುತ್ತಿದ್ದರು. ಆದ್ದರಿಂದ ಆ ಮಹನೀಯರನ್ನು ಪರಿಚಯ ಮಾಡಿಕೊಳ್ಳುವ ಸದವಕಾಶವೂ ನನಗೆ ಲಭಿಸಿತು.

೨

ಬಿ.ಎಂ.ಶ್ರೀ. ಅವರನ್ನು ಪುನಃ ಪುನಃ ಕಂಡು ಅವರ ಪರಿಚಯವನ್ನು ಹೆಚ್ಚಿಸಿಕೊಳ್ಳುವ ಭಾಗ್ಯ ನನ್ನ ವಿದ್ಯಾರ್ಥಿದೆಸೆಯಲ್ಲಿ ಅನಿರೀಕ್ಷಿತವಾಗಿ ಒದಗಿ ಬಂದಿತು. ವಿಜ್ಞಾನದ ವಿದ್ಯಾರ್ಥಿಯಾಗಿದ್ದ ನಾನು ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ಬಳಿಕ ಕನ್ನಡ ಬಿ.ಎ. (ಆನರ್ಸ್) ತರಗತಿಗೆ ಸೇರಬೇಕೆಂದು ಮೈಸೂರಿನ ಮಹಾರಾಜಾ ಕಾಲೇಜಿಗೆ ಅರ್ಜಿಯನ್ನು ಕಳುಹಿಸಿದ್ದೆ. ಆ ವೇಳೆಗೆ ಬೆಂಗಳೂರಿನಲ್ಲಿಯೇ ಇದ್ದ ಎ. ಆರ್. ಕೃಷ್ಣಶಾಸ್ತ್ರಿಗಳು ಆಗ ತಾನೆ ಮೈಸೂರಿಗೆ ವರ್ಗವಾಗಿ ಕನ್ನಡದ ಪ್ರಾಧ್ಯಾಪಕರಾಗಿದ್ದರು. ಅವರ ಪರಿಚಯವೂ ಇದ್ದುದರಿಂದ ನನ್ನ ಅರ್ಜಿಯನ್ನು ಕಳುಹಿಸುವುದಕ್ಕೆ ಮುಂಚೆ ಅವರನ್ನು ಕಂಡು, ನನ್ನ ಅಪೇಕ್ಷೆಯನ್ನು ತಿಳಿಸಿದೆ. ಅವರೂ ಸಹ ನನಗೆ ಉತ್ತೇಜನಕಾರಕವಾದ ಮಾತುಗಳನ್ನೇ ಆಡಿದ್ದರು. ಆ ದಿನಗಳಲ್ಲಿ ನಿಯಮ ನಿರ್ಬಂಧಗಳು ಕಟ್ಟುನಿಟ್ಟಾಗಿದ್ದುವು. ನಾನು ಅರ್ಜಿಯನ್ನು ಸಲ್ಲಿಸಿದ ಕೆಲವು ದಿನಗಳಲ್ಲಿಯೇ "ನಾನು ವಿಜ್ಞಾನದ ವಿದ್ಯಾರ್ಥಿಯಾದುದರಿಂದ, ನನ್ನನ್ನು ಕನ್ನಡದ (ಆನರ್ಸ್) ತರಗತಿಗೆ ಸೇರಿಸಿಕೊಳ್ಳಲು ಆಸ್ಪದವಿಲ್ಲ" ಎಂದು ಆಗ ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಜೆ.ಸಿ. ರಾಲೋ ಅವರಿಂದ ಉತ್ತರ ಬಂದಿತು. ಅದನ್ನು ಕಂಡೊಡನೆಯೇ ನಾನು ತುಂಬಾ ಹತಾಶನಾದೆ. ಆದರೂ, ಧೈರ್ಯ ಮಾಡಿಕೊಂಡು ನನ್ನ ಕನ್ನಡದ ಗುರುಗಳಾಗಿದ್ದ ವಿ. ಸೀ. ಅವರ ಬಳಿಗೆ ಹೋಗಿ ಅವರಲ್ಲಿ ವಿಷಯವನ್ನು ತಿಳಿಸಿದೆ. ನನ್ನ ಕವಿತೆ, ನಾಟಕಗಳನ್ನು ಓದಿ ಸಂತೋಷಪಟ್ಟಿದ್ದ ಅವರು, "ನೀವು ಬಿ.ಎಂ.ಶ್ರೀ. ಅವರನ್ನು ಕಂಡು ಅವರಿಗೆ ಈ ವಿಷಯವನ್ನು ತಿಳಿಸಿರಿ. ಅವರು ಶಿಫಾರಸು ಮಾಡಿದ್ದೇ ಆದರೆ, ನಿಮಗೆ ಕನ್ನಡ ಬಿ.ಎ. (ಆನರ್ಸ್) ತರಗತಿಗೆ ಪ್ರವೇಶ ದೊರೆಯುವುದು ಕಷ್ಟವಾಗದು" ಎಂದು ಸಲಹೆ ಮಾಡಿದರು.

ಬಿ.ಎಂ.ಶ್ರೀ. ಅಂತಹ ಹಿರಿಯ ವಿದ್ವಾಂಸರನ್ನು ನನ್ನಂತಹ ತರುಣನು ಒಂದೊಂದು ಸಲ ಹೋಗಿ ನೋಡುವುದೇ ಬಹಳ ಕಷ್ಟವಾದ ಕೆಲಸ. ಅದರಲ್ಲಿಯೂ ಈಗ ಅವರನ್ನು ಕಂಡು ಶಿಫಾರಸನ್ನು ಕೇಳುವುದೆಂದರೆ ಏನೋ ಎಂತೋ ಎಂದು ನನ್ನ ಆತಂಕ! ಆದರೂ ಆದಷ್ಟು ಧೈರ್ಯಮಾಡಿಕೊಂಡು ಅವರನ್ನು ಕಂಡು ನನ್ನ ವಿಷಯವನ್ನೆಲ್ಲ ವಿವರಿಸಿದೆ. ಅವರು ಸ್ವಲ್ಪ ಆಲೋಚಿಸಿ "ನೀವು ಕನ್ನಡದಲ್ಲಿ ಒಳ್ಳೆಯ ಅಂಕವನ್ನೇ ಗಳಿಸಿದ್ದೀರಿ. ಅಷ್ಟೇ ಅಲ್ಲದೆ, ಸಾಕಷ್ಟು ಲೇಖನಾದಿಗಳನ್ನೂ ಬರೆದಿರುತ್ತೀರಿ. ಆದ್ದರಿಂದ, ನಿಮ್ಮನ್ನು ಕನ್ನಡ ಬಿ. ಎ.

(ಆನರ್ಸ್) ತರಗತಿಗೆ ಸೇರಿಸಿಕೊಳ್ಳಲು ಕಷ್ಟವಾಗದು. ಈಗ ಮೈಸೂರಿಗೆ ಹೋಗಿ ಉಪಕುಲಪತಿಗಳಾದ ಎನ್. ಎಸ್. ಸುಬ್ಬರಾಯರನ್ನು ಕಂಡು ಈ ಸಂಗತಿಯನ್ನು ತಿಳಿಸಿರಿ. ಅವರು ಸಮ್ಮತಿಸಿದರೆ ಕೆಲಸ ನೆರವೇರುವುದು” ಎಂದು ಸಹಾನುಭೂತಿಯಿಂದ ಮಾತನಾಡಿದರು. ನಾನು “ನನ್ನ ಬಗ್ಗೆ ತಾವು ಒಂದು ಶಿಫಾರಸು ಪತ್ರ ಬರೆದುಕೊಟ್ಟರೆ ತುಂಬಾ ಉಪಕಾರವಾಗುತ್ತದೆ” ಎಂದು ನಾನು ಕೋರಿದೆ. ಅವರಾದರೋ ಉಪಕುಲಪತಿಗಳಿಗೆ ಹಾಗೆ ಪತ್ರ ಬರೆದುಕೊಡುವುದು ಉಚಿತವಲ್ಲ. ಅವರು ನನ್ನ ಅಭಿಪ್ರಾಯವನ್ನು ಕೇಳಿದ್ದೇ ಆದರೆ ನಿಮ್ಮ ಪರವಾಗಿಯೇ ಹೇಳುತ್ತೇನೆ. ಸದ್ಯಕ್ಕೆ ನೀವು ನನ್ನ ಹೆಸರನ್ನು ಹೇಳಿ. ನಾನು ನಿಮ್ಮನ್ನು ಚೆನ್ನಾಗಿ ಬಲ್ಲೆನೆಂದು ತಿಳಿಸಿ. ನಿಮ್ಮ ಪ್ರಯತ್ನ ಶುಭಪ್ರದವಾಗಲಿ” ಎಂದು ಭರವಸೆಯ ಮಾತುಗಳನ್ನು ಆಡಿದರು. ನಾನು ಅಷ್ಟಕ್ಕೇ ಸಮಾಧಾನ ಮಾಡಿಕೊಂಡೆ.

ಬಿ.ಎಂ.ಶ್ರೀ. ಅವರ ಸಲಹೆಯ ಮೇರೆಗೆ, ಮೈಸೂರಿಗೆ ಬಂದು ವಿಶ್ವವಿದ್ಯಾನಿಲಯದ ಉಪಕುಲಪತಿಗಳನ್ನು ಭೇಟಿ ಮಾಡಿದೆ. ಅವರನ್ನು ಕಂಡೊಡನೆಯೇ ನನ್ನ ವಿಷಯವನ್ನೆಲ್ಲ ತಿಳಿಸಿದೆ. ನಾನು ಬರೆದಿದ್ದ ಲೇಖನಗಳ ಕಟ್ಟನ್ನು ಅವರಿಗೆ ತೋರಿಸಲು ಪ್ರಯತ್ನಿಸಿದೆ. ಅವರಾದರೋ ನನ್ನ ಮಾತುಗಳಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳದೆ, “ನಾನೇನೂ ಮಾಡುವಂತಿಲ್ಲ. ನೀವು ಕಛೇರಿಯಲ್ಲಿ ಒಂದು ಮನವಿಯನ್ನು ಕೊಟ್ಟು ಹೋಗಿ, ಅದನ್ನು ವಿಶ್ವವಿದ್ಯಾನಿಲಯದ ಆಡಳಿತ ಮಂಡಳಿಯವರು (University Council) ಒಪ್ಪಿದರೆ ಆಗಬಹುದು” ಎಂದು ಬಹಳ ಗಡಿಬಿಡಿಯಿಂದ ಮಾತನಾಡಿದರು. ನಾನು ಸಪ್ಪೆ ಮೋರೆ ಹಾಕಿಕೊಂಡು, ನನ್ನ ಕಂತೆಯ ಸಮೇತ, ಮಹಡಿಯ ಮೆಟ್ಟಲುಗಳನ್ನು ಇಳಿದುಬಂದೆ.

ಮೈಸೂರಿನಲ್ಲಿಯೇ ಇದ್ದ ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ಎಲ್ಲವನ್ನೂ ತಿಳಿಸಿದೆ. ಅವರು ತುಂಬಾ ನೊಂದುಕೊಂಡು “ನಾನು ಏನು ಮಾಡಲಪ್ಪ. ನಿಮ್ಮ ಬಗ್ಗೆ ಚೆನ್ನಾಗಿ ಶಿಫಾರಸು ಮಾಡಿರುತ್ತೇನೆ. ಫರಂಗಿಯವನು ಒಂದು ಸಲ ಮನಸ್ಸು ಮಾಡಿದರೆ, ಬದಲಾಯಿಸುವುದು ಕಷ್ಟ” ಎಂದು ತಮ್ಮ ಅಸಹಾಯಕತೆಯನ್ನು ತಿಳಿಸಿದರು.

ಕಡೆಗೆ, ಬಂದ ದಾರಿಗೆ ಸುಂಕವಿಲ್ಲವೆಂದು, ಬೆಂಗಳೂರಿಗೆ ಹಿಂತಿರುಗಲು ನಿರ್ಧರಿಸಿದೆ. ಆಗ ನನ್ನ ಮಿತ್ರರೊಬ್ಬರು “ನಿಮಗೆ ಪತ್ರ ಬರೆದಿರುವ ಪ್ರಿನ್ಸಿಪಾಲರನ್ನೇ ಏಕೆ ನೋಡಬಾರದು?” ಎಂದು ಸೂಚಿಸಿದರು. “ಫರಂಗಿಯವನನ್ನು

ಕಂಡು ಮಾತನಾಡುವುದು ಹೇಗೆ?" ಎಂದು ಹೃದಯ ಸ್ವಲ್ಪ ಹಿಂತೆಗೆಯಿತು. ಆದರೂ ಏಕೆ ಪ್ರಯತ್ನಿಸಬಾರದು ಎಂದುಕೊಂಡು, ಧೈರ್ಯ ತಂದುಕೊಂಡು ಅವನನ್ನೇ ಹೋಗಿ ಕಂಡೆ. ಹತಾಶನಾಗಿದ್ದ ನನ್ನನ್ನು ಕಂಡಕೂಡಲೆ, ಆತನು ನನ್ನ ವಿಷಯವನ್ನು ಸಮಾಧಾನದಿಂದಲೇ ಆಲಿಸಿದನು. ಅನಂತರ ಸ್ವಲ್ಪ ಆಲೋಚಿಸಿ "ಏನೋ ನೆನೆಸಿಕೊಂಡು" ಕನ್ನಡ ಪ್ರೊಫೆಸರ್ ನಿಮ್ಮ ಬಗ್ಗೆ ಬಹಳ ಒಳ್ಳೆಯ ಶಿಫಾರಸು ಮಾಡಿದ್ದಂತೆ ನೆನಪು" ಎಂದನು. ನಾನು ಹೆದರು ಹೆದರುತ್ತ "ಇರಬಹುದು ಸಾರ್, ಅವರು ನನ್ನನ್ನು ಚೆನ್ನಾಗಿ ಬಲ್ಲರು" ಎಂದೆ. ಕೂಡಲೇ ಕಛೇರಿಯಿಂದ ನನ್ನ ಅರ್ಜಿಯನ್ನು ತರಿಸಿಕೊಂಡನು. ನಾನು ಸ್ವಲ್ಪ ಕಾಲ ಹೊರಗಡೆ ಕಾದಿದ್ದೆ. ಎ.ಆರ್. ಕೃಷ್ಣಶಾಸ್ತ್ರಿಗಳು ಬರೆದಿದ್ದ ಶಿಫಾರಸನ್ನು ನಾನೂ ಬರೆದಿದ್ದ ಲೇಖನಾದಿಗಳ ಪಟ್ಟಿಯನ್ನೂ ಪುನಃ ಪರಿಶೀಲಿಸಿ, ನನ್ನನ್ನು ತಾತ್ಕಾಲಿಕವಾಗಿ ಕನ್ನಡ ಬಿ.ಎ. (ಆನರ್ಸ್) ತರಗತಿಗೆ ಸೇರಿಸಿಕೊಳ್ಳಲಾಗಿದೆಯೆಂದೂ ಅದನ್ನು ವಿಶ್ವವಿದ್ಯಾನಿಲಯದವರು ಸಮ್ಮತಿಸಬೇಕೆಂದೂ ಪ್ರತ್ಯೇಕವಾಗಿ ಪತ್ರ ಬರೆದನು. ಆ ವಿಷಯವನ್ನು ಕೇಳಿದ ಕೂಡಲೆ ನನಗೆ ಆದ ಆನಂದ ಹೇಳತೀರದು. ಬಹಳ ದೊಡ್ಡ ದಿಗ್ವಿಜಯವನ್ನು ಸಾಧಿಸಿದಷ್ಟು ಸಂತೋಷವಾಯಿತು. ಕೂಡಲೇ ಎ.ಆರ್. ಕೃಷ್ಣಶಾಸ್ತ್ರಿಯವರಲ್ಲಿಗೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿಸಿದೆ. ಅವರಿಗೆ, ನನಗಿಂತಲೂ ಒಂದು ಪಟ್ಟು ಹೆಚ್ಚು ಹರುಷವಾಯಿತು ಎನ್ನಬಹುದು. ಅವರು ನನ್ನ ಹೊಣೆಗಾರಿಕೆಯನ್ನು ತಿಳಿಸಿ, ಆದಷ್ಟು ಬೇಗನೆ ತರಗತಿಗೆ ಸೇರಿಕೊಳ್ಳಬೇಕೆಂದರು. ಅಷ್ಟೇ ಅಲ್ಲದೆ, ಫರಂಗಿಯವನು ಮನಸ್ಸು ಮಾಡಿದ ಮೇಲೆ ಮುಂದೆ ಎಲ್ಲ ಸುಗಮವಾಗುವುದೆಂದು ಭರವಸೆಯಿತ್ತರು. (ಅವರ ಮಾತು ನಿಜವಾಯಿತು.)

* * * *

ಬೆಂಗಳೂರಿಗೆ ಬಂದು, ಬಿ.ಎಂ ಶ್ರೀ. ಅವರನ್ನು ಪುನಃ ಕಂಡು ಮೈಸೂರಿನಲ್ಲಿ ನಡೆದುದೆಲ್ಲವನ್ನೂ ವಿವರಿಸಿದೆ. ಅವರೂ ಸಹ, ಜೆ.ಸಿ. ರಾಲೋ ಅವರ ಸಕಾಲಿಕ ಪರಿಶೀಲನೆಯ ವಿಷಯವನ್ನು ಕೇಳಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಎ. ಆರ್. ಕೃಷ್ಣಶಾಸ್ತ್ರಿಗಳಂತೆಯೇ ಅವರೂ ಸಹ ನನ್ನ ಜವಾಬ್ದಾರಿಯನ್ನು ಒತ್ತಿಹೇಳಿದರು.

* * * *

ಅಂದು ಕನ್ನಡ ಪ್ರಾಧ್ಯಾಪಕರಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳು ನನ್ನ ಬಗ್ಗೆ ತೆಗೆದುಕೊಂಡ ನಿರ್ಣಯ, ಉತ್ತರೋತ್ತರದಲ್ಲಿ ವಿಶ್ವವಿದ್ಯಾನಿಲಯದವರ

ಅನುಮತಿಗೆ ಪಾತ್ರರಾಗಿ, ಮುಂದೆ ಬಂದ ವಿದ್ಯಾರ್ಥಿಗಳಿಗೆಲ್ಲ ಅದು ಸುಲಭವಾಗಿ ಅನ್ವಯಿಸುವಂತಾಯಿತು.

೩

ಕನ್ನಡ ಬಿ. ಎ. (ಆನರ್ಸ್) ತರಗತಿಗೆ ಸೇರಿದ ಬಳಿಕ, ಆಗಿಂದಾಗ್ಗೆ ಬಿ.ಎಂ.ಶ್ರೀ. ಅವರನ್ನು ನೋಡುವ ಅವಕಾಶ ಉಂಟಾಯಿತು. ಒಮ್ಮೆ ಅವರು ಮೈಸೂರಿಗೆ ಕಾಲೇಜಿನ ಉತ್ಸವವೊಂದರಲ್ಲಿ ಭಾಗವಹಿಸಲು ಬಂದಿದ್ದರು. ಆಗ ತಾನೆ ಪ್ರಕಟವಾಗಿದ್ದ ವಿದ್ಯಾರ್ಥಿ ಸಂಘದ ಪತ್ರಿಕೆಯಲ್ಲಿ ಅಚ್ಚಾಗಿದ್ದ ನನ್ನ ಪದ್ಯವೊಂದನ್ನು ಓದಿ ತಮ್ಮ ಅಮಿತವಾದ ಸಂತೋಷವನ್ನು ವ್ಯಕ್ತಪಡಿಸಿದರು. ಆಧುನಿಕ ಕನ್ನಡದ ಆಚಾರ್ಯರಾದ 'ಶ್ರೀ' ಅವರು ಆಗ ನನ್ನ ಭುಜವನ್ನು ತಟ್ಟಿ, ಇಂತೆಯೇ ಮುಂದುವರಿಸಿರಿ" ಎಂದು ಹೇಳಿದ್ದನ್ನು ನೆನೆದರೆ ಅವರ ಶಿಷ್ಯವಾತ್ಸಲ್ಯವೆಷ್ಟೆಂಬುದು ಸ್ವಯಂವಿದಿತವಾಗುತ್ತದೆ. ನನ್ನ ಪ್ರಾಧ್ಯಾಪಕರಾಗಿದ್ದ ಎ.ಆರ್. ಕೃಷ್ಣಶಾಸ್ತ್ರಿಗಳವರೂ ಅವರಿಗೆ ನನ್ನ ಪ್ರಗತಿಯ ಬಗ್ಗೆ ಸಾಕಷ್ಟು ವಿಷಯಗಳನ್ನು ತಿಳಿಸಿದ್ದ ಸಂಗತಿ, ಅವರಿಂದಲೇ ತಿಳಿದುಬಂದಿತು.

* * * *

ಕನ್ನಡ ಎಂ.ಎ. ತರಗತಿಯ ವಿದ್ಯಾರ್ಥಿಗಳಿಗೆ ಬಿ.ಎಂ.ಶ್ರೀ. ಅವರು ವರ್ಷದ ಕೊನೆಯಲ್ಲಿ ದ್ರಾವಿಡಭಾಷಾಶಾಸ್ತ್ರವನ್ನು ಕುರಿತಂತೆ ವಿಶೇಷ ಉಪನ್ಯಾಸಗಳನ್ನು ನೀಡುತ್ತಿದ್ದರು. ಆ ಸಲುವಾಗಿ ಅವರು ಬೆಂಗಳೂರಿನಿಂದ ಬರುತ್ತಿದ್ದರು. ಒಮ್ಮೊಮ್ಮೆ ಅವರು ಗಂಟೆಗಟ್ಟಲೆ ಪಾಠ ಮಾಡುತ್ತಿದ್ದರು. ಕಠಿನವಾದ ಶಾಸ್ತ್ರ ವಿಷಯವನ್ನೂ ಸಹ ಅವರು ಅತ್ಯಂತ ಸ್ವಾರಸ್ಯವಾಗಿ ತಿಳಿಸುತ್ತಿದ್ದರೆ ನಮಗೆ ಹೊತ್ತು ಹೋಗುವುದೇ ಗೊತ್ತಾಗುತ್ತಿರಲಿಲ್ಲ. ಡಾ|| ರಾಬರ್ಟ್ ಕಾಲ್ಡ್‌ವೆಲ್ ಬರೆದಿರುವ "A Comparative Grammer of the Dravidian Languages" ಎಂಬ ಪುಸ್ತಕದ ಮೇಲಿನ ಅವರ ಅಭಿಮಾನ ಅಪಾರವಾದುದು. ಯಾವ ವಿಷಯದ ಬಗ್ಗೆಯೇ ಆಗಲಿ, ಅವರಿಗೆ ತೌಲನಿಕ ಅಧ್ಯಯನ ಕ್ರಮದಲ್ಲಿ ತುಂಬ ಆಸಕ್ತಿ. ಒಮ್ಮೆ, ಅವರು "ಜನ್ನನ ಯಶೋಧರ ಚರಿತೆ" ಯನ್ನು ಕುರಿತು ಭಾಷಣ ಮಾಡುತ್ತಿರುವಲ್ಲಿ, ಅದರ ಕಥಾವಸ್ತುವಿಗೂ ಕೋಲ್‌ರಿಡ್ಜ್ ಕವಿಯ "The rime of the Ancient Mariner" ಎಂಬ ಕಥನ ಕವನದ ವಸ್ತುವಿಗೂ ಇರುವ ಸಾದೃಶ್ಯವನ್ನು ಸಮರ್ಥಿಸಿದ ಸಂಗತಿಯನ್ನು ಸಭಿಕರೆಲ್ಲರೂ ಕೇಳಿ ಸಂತೋಷಿಸಿದ ಸಂದರ್ಭ ಇಂದಿಗೂ ನೆನಪಿದೆ (ಆಗ ನಾನು ಪ್ರೌಢ ಶಾಲೆಯಲ್ಲಿ ಓದುತ್ತಿದ್ದೆ). ಅವರು

ತಮ್ಮ ಪಾಠಗಳಲ್ಲಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡನ್ನು ಅನಾಯಾಸವಾಗಿ ಬೆರೆಸುತ್ತಿದ್ದರು.

ಕನ್ನಡ ಎಂ.ಎ. ಪರೀಕ್ಷೆಗೆ ಅವರು ನಮ್ಮ ಪರೀಕ್ಷಕರೂ ಆಗಿದ್ದರು. ಈ ಸಂಗತಿ ನಮಗೆ ವಾಚಾ ಪರೀಕ್ಷೆಯ ದಿನವೇ ತಿಳಿದುಬಂದಿದ್ದು. ಅವರು ಬಹುಮಟ್ಟಿಗೆ ಕಠಿನವಾದ ಪರೀಕ್ಷಕರೆಂದು ಪ್ರತೀತಿ ಇದ್ದುದರಿಂದ, ವಾಚಾ ಪರೀಕ್ಷೆಗೆ ಹೋದ ದಿನ ಈ ಸಂಗತಿ ತಿಳಿದುಬರಲು ನನಗೂ ಮತ್ತು ನನ್ನ ಮಿತ್ರರಿಗೂ ಜಂಘಾಬಲವೇ ಉಡುಗಿಹೋದಂತಾಯಿತು. ಅವರು ತಮ್ಮ ರಾಜಠೀವಿಯಿಂದ ನಡೆದುಬಂದುದೇ ತಡ, ನಾವು ಪರಸ್ಪರರ ಮುಖ ನೋಡಿಕೊಂಡೆವು. ಸಭಾಲಯದಲ್ಲಿ ಪರೀಕ್ಷೆ ಪ್ರಾರಂಭವಾಯಿತು. ಆಗ ನಮ್ಮ ಉತ್ತರ ಪತ್ರಿಕೆಗಳನ್ನೆಲ್ಲ ತಮ್ಮ ಮುಂದಿಟ್ಟುಕೊಂಡು, ಪರೀಕ್ಷಕರು ಪ್ರಶ್ನೆಗಳ ಮೇಲೆ ಪ್ರಶ್ನೆ ಕೇಳುತ್ತಿದ್ದರು. ನಾವು ಮಾಡಿದ ತಪ್ಪುಗಳನ್ನೆಲ್ಲ ಎತ್ತಿ ತೋರಿಸಿ, ನಮ್ಮನ್ನು ಧರ್ಮಸಂಕಟಕ್ಕೆ ಸಿಕ್ಕಿಸುತ್ತಿದ್ದರು. ನಾಲ್ಕು ಜನ ಪರೀಕ್ಷಕರು ಒಬ್ಬರ ತರುವಾಯ ಒಬ್ಬರು ಪ್ರಶ್ನೆ ಕೇಳಿ, ವಿದ್ಯಾರ್ಥಿಗಳನ್ನು ಅಗ್ನಿಪರೀಕ್ಷೆಗೆ ಗುರಿಮಾಡುತ್ತಿದ್ದರು. ಆ ಪದ್ಧತಿ ಸಾಕಷ್ಟು ಮಟ್ಟಿಗೆ ನಮ್ಮ ಸಾಮರ್ಥ್ಯ ಪರೀಕ್ಷೆಗೆ ಒಳ್ಳೆಯ ಒರೆಗಲ್ಲೇ ಆಗಿತ್ತು ಎನ್ನಬಹುದು. ನಮ್ಮಲ್ಲಿ ಒಬ್ಬೊಬ್ಬರಿಗಾಗಿ ಪರೀಕ್ಷೆ ಮುಗಿಯಲು ನನ್ನ ಸರದಿ ಬಂದಿತು. ಒಳಗೆ ಪ್ರವೇಶಿಸಿದ ಕೂಡಲೇ ಎಲ್ಲ ಪರೀಕ್ಷಕರಿಗೂ ನಮಿಸಿ, ಕುರ್ಚಿಯಲ್ಲಿ ಕುಳಿತುಕೊಂಡೆ. ಅಂದು ಬಂದಿದ್ದ ಪರೀಕ್ಷಕರಲ್ಲಿ ಬಿ.ಎಂ.ಶ್ರೀ. ಅವರೇ ಹಿರಿಯರಾಗಿದ್ದುದರಿಂದ ಅವರೇ ಮೊದಲು ಪ್ರಶ್ನೆ ಕೇಳಿದರು. ನನ್ನ ಉತ್ತರ ಪತ್ರಿಕೆಯನ್ನು ತಿರುವಿ ಹಾಕುತ್ತ, ಕನ್ನಡದ ಅಷ್ಟಷಟ್ಪದಿಗಳನ್ನು ಕುರಿತಂತೆ ನಾನು ಬರೆದಿದ್ದ ಉತ್ತರದ ಮೇಲೆ ಪ್ರಶ್ನೆ ಪ್ರಾರಂಭಿಸಿದರು. ಇಂಗ್ಲಿಷ್ ಅಷ್ಟಷಟ್ಪದಿಗಳ ಲಕ್ಷಣವನ್ನು ವಿವರಿಸುತ್ತ, ಅಲ್ಲಿನ 'Octowe' ಮತ್ತು 'Sestet' ಎಂಬ ವಿಭಾಗಗಳಿಗೆ ಸಂವಾದಿಯಾಗಿ ನಮ್ಮಲ್ಲಿಯೂ ಕ್ರಮವಾಗಿ 'ಪೂರ್ವಾಷ್ಟಕ' ಮತ್ತು "ಷಡೋತ್ತರ" ಎಂಬ ಪದಗಳನ್ನು ಬಳಸಬಹುದೆಂದು ಬರೆದಿದ್ದೆ. "ಈ ಶಬ್ದಗಳನ್ನು ನೀವೇ ಸೃಷ್ಟಿಮಾಡಿದಿರೋ ಇಲ್ಲವೇ ಬೇರೆ ಯಾರಾದರೂ ಬಳಸಿದ್ದಾರೆಯೋ?" ಎಂದು ಪ್ರಶ್ನಿಸಿದರು. ನಾನು "ಕನ್ನಡದ ಅಷ್ಟಷಟ್ಪದಿಗಳು ಎಂಬ ಪ್ರಬಂಧವೊಂದನ್ನು ಬರೆದಿದ್ದೇನೆ. ಅದು ಇನ್ನೂ ಪ್ರಕಟವಾಗಿಲ್ಲ. ಆ ಪ್ರಬಂಧದಲ್ಲಿ ಆ ಎರಡು ಪದಗಳನ್ನು ಬಳಸಿರುತ್ತೇನೆ. ಅವುಗಳನ್ನು ನಾನೇ ಸೃಷ್ಟಿ ಮಾಡಿದೆ" ಎಂದು ಉತ್ತರವಿತ್ತೆ. ನನ್ನ ಮಾತುಗಳನ್ನು ಕೇಳಿ ಅವರಿಗೆ ತುಂಬ ಸಂತೋಷ

ವಾಯಿತು. ಸ್ವತಂತ್ರವಾಗಿ ಆಲೋಚಿಸಿ ಬರೆದಿರುವುದಕ್ಕಾಗಿ ಮೆಚ್ಚಿಕೊಂಡರು. ಹೆಚ್ಚು ಪ್ರಶ್ನೆಗಳನ್ನು ಕೇಳದೆ, ನನ್ನ ಉತ್ತರಗಳ ಬಗ್ಗೆ ತೃಪ್ತಿಯನ್ನೇ ವ್ಯಕ್ತಪಡಿಸಿದರು. ನಾಲ್ವರು ಪರೀಕ್ಷಕರ ಪ್ರಶ್ನೆಗಳ ಬಿರುಮಳೆಯಿಂದ ಪಾರಾಗಿ ಬಂದಿದ್ದಾಯಿತು. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯೂ ದೊರೆಯಿತು.

೪

ಎಂ.ಎ. ಪರೀಕ್ಷೆಯಾದ ಬಳಿಕ, ವಿಶ್ವವಿದ್ಯಾನಿಲಯದಲ್ಲಿ ಹುದ್ದೆ ದೊರೆಯದೆ ಹೋದುದರಿಂದ, ಮೈಸೂರು ಸರ್ಕಾರದ ಕನ್ನಡ ಭಾಷಾಂತರ ಕಛೇರಿಯಲ್ಲಿ ಕೆಲಸಕ್ಕೆ ಸೇರಬೇಕಾಯಿತು. ಅಲ್ಲಿ ಕೆಲಸಕ್ಕೆ ಸೇರಿದ್ದರಿಂದ ನನಗೆ ಅಷ್ಟೇನೂ ವ್ಯಥೆಯಾಗಲಿಲ್ಲ. ಏಕೆಂದರೆ ಕನ್ನಡದ ಸುಪ್ರಸಿದ್ಧ ಸಾಹಿತಿಗಳಲ್ಲಿ ಒಬ್ಬರಾಗಿದ್ದ ಸಿ. ಕೆ. ವೆಂಕಟರಾಮಯ್ಯನವರು ನಮ್ಮ ಇಲಾಖೆಯ ಮುಖ್ಯಸ್ಥರಾಗಿದ್ದರು. ಅವರು ಸ್ವಭಾವತಃ ಬಹಳ ಸರಳರು ಮತ್ತು ಸೌಜನ್ಯಶೀಲರು. ಅಂಥವರ ನೇತೃತ್ವದಲ್ಲಿ ಕೆಲಸಮಾಡಲು ಒಂದು ಸದವಕಾಶ ದೊರೆತಂತಾಗಿತ್ತು. ನಾನು ಕೆಲಸಕ್ಕೆ ಸೇರಿದ ಕೆಲವು ತಿಂಗಳುಗಳಾದ ಬಳಿಕ, ಮದರಾಸು ಸರ್ಕಾರದ ಭಾಷಾಂತರ ಕಛೇರಿಯಲ್ಲಿ ಒಂದು ಹುದ್ದೆಗಾಗಿ ಅರ್ಜಿಗಳನ್ನು ಹಾಕಿಕೊಳ್ಳಲು ಪ್ರಕಟನೆ ಬಂದಿತ್ತು. ಅದಕ್ಕೆ ಅರ್ಜಿ ಹಾಕಿಕೊಳ್ಳಲು, ಅಭ್ಯರ್ಥಿಯ ಅರ್ಹತೆಯನ್ನು ಕುರಿತಂತೆ ಯಾರಾದರೂ ಗಣ್ಯ ವಿದ್ವಾಂಸರಿಂದ ಒಂದು ಪ್ರಶಸ್ತಿಪತ್ರವನ್ನು ಸೇರಿಸಬೇಕಾಗಿತ್ತು. ಬೆಂಗಳೂರಿನಲ್ಲಿದ್ದ ನನಗೆ ತಕ್ಷಣವೇ ಬಿ.ಎಂ.ಶ್ರೀ. ಅವರ ಹೆಸರು ಹೊಳೆಯಿತು. ಅವರು ಕೊಡುವರೋ ಇಲ್ಲವೋ ಎಂಬ ಅಳುಕು ಮಿಡಿಯುತ್ತಿದ್ದರು, ಅವರ ಬಳಿಗೆ ಹೋಗಿ ನನ್ನ ವಿಚಾರವನ್ನು ತಿಳಿಸಿದೆ. ಅವರು ನನ್ನ ವಿಚಾರಗಳನ್ನೆಲ್ಲ ಸಾವಧಾನವಾಗಿ ಕೇಳಿ, ಪ್ರಶಸ್ತಿ ಪತ್ರವನ್ನು ಬರೆದುಕೊಡುವುದಾಗಿ ಸಮ್ಮತಿಸಿದರು. ಕನ್ನಡದ ಕಣ್ವರೆಂದು ಕೀರ್ತಿ ಪಡೆದ "ಶ್ರೀ" ಅವರು, ಅಂದು ನನಗೆ ಬರೆದುಕೊಟ್ಟ ಅರ್ಹತಾ ಪತ್ರದ ಒಕ್ಕಣೆ ಹೇಗಿದೆಯೆನ್ನುವುದನ್ನು ತಿಳಿಸಲು ಅದನ್ನು ಇಲ್ಲಿ ಉದಾಹರಿಸಿರುತ್ತೇನೆ.

Rajasevasakta
B.M. Srikantiah, M.A., B.L.
University Professor of
English and Honorary
Professor of Kannada (Retd.)

Basavangudi
26-12-43

I have known Mr. G. Varadaraja Rao, M.A.

for several years as a very promising student of Kannada and English in the Honours and M.A. classes of the Maharaja's College. I have also seen his work in my capacity as examiner. He is one of our very best scholars in Kannada. He has to his credit a number of articles, essays and poems which have been awarded prizes and medals. He took a second class in B.A. (Hons) standing first and a first class, the only one, in M.A. in his batch. His character is excellent. I can strongly recommend him for teaching, literary work or translation work in Kannada. He belongs to a respectable family.

B. M. Srikantiah

"ಶ್ರೀ" ಅವರು ತಮ್ಮ ಕೈಬರಹದಲ್ಲಿ ಬರೆದುಕೊಟ್ಟ ಈ ಅರ್ಹತಾಪತ್ರವನ್ನು ಕಂಡು ನಾನು ಕ್ಷಣಕಾಲ ಮೂಕವಿಸ್ಮಿತನಾದೆ. ನಾನು ಕನ್ನಡ (ಆನರ್ಸ್) ತರಗತಿಯನ್ನು ಸೇರುವುದಕ್ಕೆ ಮುಂಚೆ, ಅವರನ್ನು ಶಿಫಾರಸು ಪತ್ರವನ್ನು ಕೇಳಿಕೊಂಡಾಗ, ಅವರು ನಗುನಗುತ್ತಲೆ ನಿರಾಕರಿಸಿದ ಆ ಸಂದರ್ಭವೂ ನನ್ನ ಮನಸ್ಸಿನಲ್ಲಿ ಮಿಂಚಿನಂತೆ ಸುಳಿದುಹೋಯಿತು. ಈಗ ಕೃತಜ್ಞಪೂರ್ವಕವಾಗಿ ಬರೆದುಕೊಟ್ಟ ಆ ಅರ್ಹತಾಪತ್ರವನ್ನು ಪುನಃ ಪುನಃ ಓದಿ ನೋಡಿ ಅವರ ಮನೋಧರ್ಮವೆಂತಹುದು ಎನ್ನುವುದು ಅರಿವಾಯಿತು.

* * *

ಈಗ ನಾನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮೂವತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿ, ನನ್ನ ಗುರುಹಿರಿಯರ ಆಶೀರ್ವಾದದಿಂದ ಪ್ರಾಧ್ಯಾಪಕನಾಗಿ ನಿವೃತ್ತಿ ಹೊಂದಿದ್ದೇನೆ. ಸಾಕಷ್ಟು ವಿದ್ಯಾರ್ಥಿಗಳಿಗೆ ಪಾಠ ಹೇಳಿ, ನಾನೂ ಅವರೊಂದಿಗೆ ಸಂತೋಷಪಟ್ಟಿದ್ದೇನೆ. ನನ್ನ ಶಕ್ತಿಯಿದ್ದಷ್ಟು ಮಟ್ಟಿಗೆ ಸಾಹಿತ್ಯ ಕ್ಷೇತ್ರದಲ್ಲಿಯೂ ಶ್ರಮಿಸಿದ್ದೇನೆ.

ಆದರೂ ಒಂದು ಪ್ರಶ್ನೆ ಮೇಲಿಂದಮೇಲೆ ನನ್ನನ್ನು ಕಾಡುತ್ತಲೇ ಇರುತ್ತದೆ. ನಮ್ಮ ಗುರುಗಳು ನಿರೀಕ್ಷಿಸಿದಷ್ಟು ಎತ್ತರಕ್ಕೆ ನಾನು ಏರಲು ಸಾಧ್ಯವಾಗಿದೆಯೋ ಎಂದು !

ಜಿ. ವರದರಾಜರಾವ್

# "ದೊಡ್ಡಪ್ಪ ಬಿ. ಎಂ. ಶ್ರೀ"

'ಕನ್ನಡದ ಕಣ್ವಮುನಿ,' 'ಆಧುನಿಕ ಕರ್ಣಾಟ ಕವಿಚೂತವನ ಚೈತ್ರ,' 'ಆಧುನಿಕ ಕರ್ಣಾಟ ಕಾವ್ಯ ಕುಲಪತಿ' ಇತ್ಯಾದಿಯಾಗಿ ಹೆಸರುಗಳಿಸಿ ಈ ಶತಮಾನದಲ್ಲಿ ಘಟಿಸಿದ ಕನ್ನಡ ನವೋದಯದ ಕಾರಣ ಪುರುಷರು, ನೂತನ ಸಾಹಿತ್ಯಯಜ್ಞದ ಪ್ರಮುಖ ಅಧ್ವರ್ಯುಗಳು, 'ಶ್ರೀ' ಕಾವ್ಯನಾಮದ ಬಿ.ಎಂ.ಶ್ರೀ ಎಂಬ ಮೂರಕ್ಷರಗಳಿಂದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಖ್ಯಾತ ರಾದ ಪ್ರೊಫೆಸರ್ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರು ನನಗೆ ದೊಡ್ಡಪ್ಪನವರು. ನಮ್ಮ ತಂದೆ ಬಿ. ಎಂ. ಕೃಷ್ಣಸ್ವಾಮಿಯವರ ಹಿರಿಯಣ್ಣ.

ತುಮಕೂರು ಜಿಲ್ಲೆಗೆ ಸೇರಿದ ಸಂಪಿಗೆ ಎಂಬ ಗ್ರಾಮದಲ್ಲಿ ಶ್ರೀಕಂಠಯ್ಯ ನವರು ೧೮೮೪ನೆಯ ಜನವರಿ ಮೂರನೆಯ ತಾರೀಖು ಜನಿಸಿದರು. ತಂದೆ ಬೆಳ್ಳೂರು ಮೈಲಾರಯ್ಯನವರು, ತಾಯಿ ಭಾಗೀರಥಮ್ಮನವರು. ಹುಟ್ಟಿದ ಮೂರು ಗಂಡು, ಎರಡು ಹೆಣ್ಣು ಮಕ್ಕಳಲ್ಲಿ ಶ್ರೀಕಂಠಯ್ಯನವರೇ ಹಿರಿಯರು. ಆದ್ದರಿಂದ ಮನೆಯವರೆಲ್ಲ ಅವರನ್ನು ಪ್ರೀತಿಯಿಂದ 'ಅಣ್ಣಯ್ಯ' ಎಂದೇ ಕರೆಯುತ್ತಿದ್ದರು. ಹತ್ತಿರದ ಸಂಬಂಧಿಕರಿಗೆಲ್ಲ ಅವರು 'ಅಣ್ಣಯ್ಯ'. ಎಲ್ಲರದೂ ಅದೇ ಗೌರವದ ಸಂಬೋಧನೆ, ಅಷ್ಟೇ ವಿಶ್ವಾಸ.

ಶ್ರೀಕಂಠಯ್ಯನವರು ಬಾಲ್ಯದ ವಿದ್ಯಾಭ್ಯಾಸ ಶ್ರೀರಂಗಪಟ್ಟಣದಲ್ಲಿ ಮುಗಿಸಿ, ಮೈಸೂರಿನಲ್ಲಿ ಬಿ.ಎ. ಓದಿ, ಮದ್ರಾಸಿನಲ್ಲಿ ಬಿ.ಎಲ್. ಮಾಡಿ ನಂತರ ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ೧೯೦೯ರಲ್ಲಿ ಮೈಸೂರು ಸರ್ಕಾರ ಅವರನ್ನು ಮಹಾರಾಜ ಕಾಲೇಜಿನಲ್ಲಿ ಇಂಗ್ಲೀಷ್ ಮತ್ತು ಕನ್ನಡ ಬೋಧಿಸುವ ಅಧ್ಯಾಪಕರ ಕೆಲಸಕ್ಕೆ ನೇಮಿಸಿತು. ೧೯೨೬ರಲ್ಲಿ ಮೈಸೂರು ವಿಶ್ವವಿದ್ಯಾ ನಿಲಯದ ರಿಜಿಸ್ಟ್ರಾರ್ ಆದರು. ಈ ಉನ್ನತ ಪದವಿಯಲ್ಲಿದ್ದಾಗ ಅನೇಕ ತರುಣ ಬರಹಗಾರರನ್ನು ಅವರು ಸೃಷ್ಟಿಸಿದರು. ಅವರ ಪ್ರಯತ್ನದಿಂದ ಕನ್ನಡದ ಎಂ.ಎ. ತರಗತಿಯನ್ನು ತೆರೆಯಲಾಯಿತು. ೧೯೩೦ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಪ್ರಥಮ ದರ್ಜೆಯ ಪ್ರಾಧ್ಯಾಪಕರಾಗಿದ್ದಾಗಲೇ 'ಇಂಗ್ಲಿಷ್ ಸೆಮಿನಾರ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಆಶ್ರಯದಲ್ಲಿ ಸಾಹಿತ್ಯದ ಬಗ್ಗೆ ಚರ್ಚೆಗಳು ನಡೆಯುವ ಅವಕಾಶ ಮಾಡಿಕೊಟ್ಟ ಕೀರ್ತಿ 'ಶ್ರೀ'ಯವರದು.

ಬಿ. ಎಂ. ಶ್ರೀಕಂಠಯ್ಯನವರು ಲೌಕಿಕ ಪ್ರಪಂಚದಲ್ಲಿ ದುಃಖ ಉಂಡವರು. ನಾನಾ ಕಷ್ಟಗಳನ್ನು ಎಳೆಯ ಪ್ರಾಯದಲ್ಲೇ ಅನುಭವಿಸಿ ಮೆತ್ತಗಾದವರು.

ಪ್ರಾಯದಲ್ಲೇ ಮೂರು ಎಳೆಯ ಮಕ್ಕಳನ್ನು ಮಡಿಲಿಗೆ ಹಾಕಿ ಮಡದಿ ದೇವಮ್ಮ ಬಾಳಿನಿಂದ ಸರಿದುಹೋದರು. ಒಬ್ಬನೇ ಮಗ ಕುರುಡನಾದ. ಅವರ ಒಂಟಿತನದ ಬಾಳಿನ ವ್ಯಥೆ, ಮಕ್ಕಳ ಜವಾಬ್ದಾರಿ, ಒಂದಾದಮೇಲೊಂದರಂತೆ ಬಿದ್ದ ಪೆಟ್ಟುಗಳ ನೋವು ಎಲ್ಲವನ್ನೂ ಅವರು ಹೇಗೆ ನುಂಗಿ ಜೀರ್ಣಿಸಿಕೊಂಡರು ಎಂಬುದನ್ನು ಇತರರು ಊಹಿಸಿಕೊಳ್ಳುವುದೂ ಅಸಾಧ್ಯ. ಅವರು ಕರ್ತವ್ಯವನ್ನು ಕಡೆಗಣಿಸಲಿಲ್ಲ. ಮಕ್ಕಳನ್ನು ಪ್ರೀತಿಯಿಂದ ಸಾಕಿ ಬೆಳೆಸಿದರು. ನಂತರ ಸಂಪೂರ್ಣವಾಗಿ ಮನಸ್ಸನ್ನು ಕನ್ನಡದ ಕಡೆ ತಿರುಗಿಸಿದರು.

ಕನ್ನಡ ಸಾಹಿತ್ಯ ಜೀವನದ ಆರಂಭದ ದೆಸೆಯಲ್ಲಿ ಇಂಗ್ಲೀಷ್ ಸಾಹಿತ್ಯದ ವ್ಯಾಮೋಹಕ್ಕೆ ಒಳಗಾಗಿದ್ದ ಶ್ರೀಕಂಠಯ್ಯನವರು ಎಲ್ಲರೊಂದಿಗೆ ಇಂಗ್ಲೀಷಿನಲ್ಲೇ ಮಾತನಾಡುತ್ತಿದ್ದರು. ಅವರಿಗೆ ಮಾತೃಭಾಷೆಯಾದ ಕನ್ನಡ ಭಾಷೆ, ಸಾಹಿತ್ಯದಲ್ಲಿ ಅಭಿಮಾನ, ಉತ್ಸಾಹ, ಪ್ರೀತಿ, ವಿಶ್ವಾಸಗಳಿದ್ದರೂ ಅಂದಿನ ಪರಿಸ್ಥಿತಿಯಲ್ಲಿ ಹಾಗೆ ನಡೆದುಕೊಳ್ಳುವುದು ಅನಿವಾರ್ಯವಾಗಿತ್ತು. ಇಂಗ್ಲೀಷ್ ಪ್ರಾಧ್ಯಾಪಕರ ಸ್ಥಾನದಲ್ಲಿದ್ದು ಕನ್ನಡ ಭಾಷೆಗೊಂದು ಸ್ಥಾನ ಕಲ್ಪಿಸಿಕೊಡಲು ಇದರಿಂದ ಅವರಿಗೆ ಅವಕಾಶ ಸಿಕ್ಕಿತು. ಕ್ರಮೇಣ ನಿರ್ಭಯವಾಗಿ ಕನ್ನಡ ಸಾಹಿತ್ಯ ಸೃಷ್ಟಿಗೆ, ಕನ್ನಡ ಭಾಷೆಯ ಬೆಳವಣಿಗೆಗೆ ಬಿ. ಎಂ. ಶ್ರೀ ಯವರು ತಮ್ಮ ತನು, ಮನ, ಬದುಕನ್ನೇ ಧಾರೆಯೆರೆದರು.

ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಬಿ. ಎಂ. ಶ್ರೀ ಯವರ ತಲೆಯಲ್ಲಿ ಶೋಚನೀಯ ಸ್ಥಿತಿಯಲ್ಲಿದ್ದ ಕನ್ನಡದ ಚಿಂತೆ. ಬ್ರಿಟಿಷ್ ಆಡಳಿತದಲ್ಲಿದ್ದ ಭಾರತ, ಅದರಲ್ಲೊಂದು ನಾಡಾದ ಮೈಸೂರಿನಲ್ಲಿ ಅತ್ಯಂತ ಹೀನಪರಿಸ್ಥಿತಿಯಲ್ಲಿದ್ದ ಕನ್ನಡವನ್ನು ರಕ್ಷಿಸಲು, ಬೆಳೆಸಲು ಪುಣ್ಯಪುರುಷರ ಒಂದು ಚಿಕ್ಕ ಪಡೆಯ ಅಗತ್ಯವಿತ್ತು. ಶಿಕ್ಷಣ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ಕನ್ನಡ ಭಾಷೆ, ಸಾಹಿತ್ಯ ಕಣ್ಮರೆಯದಂತಹ ಗಾಢಾಂಧಕಾರದಲ್ಲಿತ್ತು. ಅದಕ್ಕೆ ಅಗತ್ಯವಾದಂತಹ ಕ್ಷೇತ್ರವನ್ನು ಹದಗೊಳಿಸುವ ಪ್ರೇರಕ ಶಕ್ತಿಯನ್ನು, ಜಾಗೃತಿಯನ್ನು, ಗತಿಶೀಲ ಸಂಘಟನೆಯನ್ನು ಒದಗಿಸುವ ಮಹತ್ಕಾರ್ಯವನ್ನು ಅಂದು 'ಶ್ರೀ'ಯವರು ಕೈಗೊಂಡರು.

ಬಿ. ಎಂ. ಶ್ರೀಕಂಠಯ್ಯನವರ ಬದುಕಿನ ಸಾಧನೆ ಸಿದ್ಧಿಗಳನ್ನು ಮೂರು ಪ್ರಾಕಾರಗಳಲ್ಲಿ ಗುರುತಿಸಬಹುದು.

ಮೊದಲನೆಯದಾಗಿ, ಇಂಗ್ಲೀಷ್ ಪ್ರಾಚಾರ್ಯರಾಗಿ, ಜ್ಞಾನದಾನಮಾಡಿ, ಕನ್ನಡಿಗರ ಎದೆಯಲ್ಲಿ ಕನ್ನಡದ ಕಿಚ್ಚುಹಚ್ಚಿಸಿ, ಉತ್ತಮಮಟ್ಟದ ಶಿಷ್ಯರ

ಸಮೂಹವನ್ನೇ 'ಶ್ರೀ'ಯವರು ಸೃಷ್ಟಿಸಿದರು. ಇಂದು ಕನ್ನಡ ಸಾಹಿತ್ಯದಲ್ಲಿ ಕೀರ್ತಿ ಗಳಿಸಿರುವವರಲ್ಲಿ ಹೆಚ್ಚುಮಂದಿ ಅವರ ಶಿಷ್ಯರು ಅಥವಾ ಅವರಿಂದ ಸ್ಫೂರ್ತಿ ಪಡೆದವರು ಮತ್ತು ಅವರು ನೀಡಿದ ಮಾರ್ಗದರ್ಶನದಲ್ಲೇ ಹೆಜ್ಜೆ ಹಾಕಿದವರು.

ಎರಡನೆಯದಾಗಿ, ಬಿ. ಎಂ. ಶ್ರೀಯವರು ಕನ್ನಡದ ಅಭಿಮಾನಿಗಳಾಗಿ, ವಿದ್ಯಾಪ್ರೇಮಿಗಳಾಗಿ, ಪ್ರಚಾರಕರಾಗಿ, ಕಾರ್ಯಕರ್ತರಾಗಿ ಕರ್ಣಾಟಕ ವನ್ನೆಲ್ಲ ಸುತ್ತಿ, ಕನ್ನಡಿಗರಲ್ಲಿ ಅಭಿಮಾನವನ್ನು ಹುಟ್ಟಿಸಿ, ನವಜಾಗೃತಿಯ ನ್ನುಂಟುಮಾಡಿ, ಕನ್ನಡನಾಡು, ನುಡಿಗಳ ಏಳಿಗೆಗಾಗಿ ಹಲವಾರು ಚಟುವಟಿಕೆ ಗಳನ್ನು ಹುಟ್ಟುಹಾಕಿ ನೀರೆರೆದು ಪೋಷಿಸಿದರು. ಕನ್ನಡ ಭಾಷೆಯ ಬೆಳ ವಣಿಗೆಗೆ, ಕನ್ನಡ ಸಾಹಿತ್ಯ ಸೃಷ್ಟಿಗೆ ತಮ್ಮ ಜೀವನವನ್ನೇ ಧಾರೆಯೆರೆದು ಹರಿದು ಹಂಚಿಹೋಗಿದ್ದ ಕನ್ನಡ ಮಾತನಾಡುವ ಜನರೆಲ್ಲ ಒಂದಾಗಬೇಕು, ಕನ್ನಡನಾಡಾಗಬೇಕು ಎಂಬ ಕನಸನ್ನು ಶ್ರೀಕಂಠಯ್ಯನವರು ಕಂಡರಲ್ಲದೆ, ಸಮಗ್ರ ಕರ್ಣಾಟಕದ ಭಾವನೆಯನ್ನು ರೂಪಿಸಿದ ಹಿರಿಯ ತಲೆಮಾರಿನ ಪುಣ್ಯ ಜೀವಿಗಳಲ್ಲೊಬ್ಬರು. ಲೇಖಕರ ಪರಂಪರೆಯನ್ನೇ ಸೃಷ್ಟಿಸಿದ ಕನ್ನಡಮ್ಮನ ಹೆಮ್ಮೆಯ ಪುತ್ರರಲ್ಲಿ ಆಚಾರ್ಯರಿವರು. ತಮ್ಮ ಕನ್ನಡತನದ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ ಹರಿಬಿಟ್ಟರು.

ಮೂರನೆಯದಾಗಿ, ಶ್ರೀಕಂಠಯ್ಯನವರು ಸಾಹಿತಿಯಾಗಿ ಅನೇಕ ಉತ್ತಮ ಕೃತಿಗಳನ್ನು ಬರೆದು ನವಯುಗದ ಪ್ರವರ್ತಕರು, ಕಾರಣಪುರುಷರು ಎನ್ನಿಸಿಕೊಂಡರು. ಐನೂರು ವರ್ಷಗಳ ದೀರ್ಘಾವಧಿಯ ಚರಿತ್ರೆಯುಳ್ಳ ಕನ್ನಡಭಾಷೆಯಲ್ಲಿರುವ ಹಳೆಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಪ್ರಮುಖ ಅವಸ್ಥಾಂತರಗಳಲ್ಲಿ ಹೊಸಗನ್ನಡದ ಆಚಾರ್ಯ ಪುರುಷ ರಲ್ಲಿ ಅಗ್ರಗಣ್ಯರಿವರು. ಅವರು ತಮ್ಮ ಪಾಂಡಿತ್ಯಕ್ಕೆ, ಅನುಭವಕ್ಕೆ, ಪ್ರಾಜ್ಞತೆಗೆ ತಕ್ಕಷ್ಟು ಕೃತಿಗಳನ್ನು ರಚಿಸಲಿಲ್ಲವಲ್ಲ ಎನ್ನುವ ಕೊರಗು ಕನ್ನಡಿಗರನ್ನು ಬಾಧಿಸದೆ ಬಿಡದು. ಅವರು ರಚಿಸಿದ ಕೃತಿಗಳು ಹಲವು. ಬರೆದದ್ದು ಕೆಲವೇ ಆದರೂ ಅವೆಲ್ಲ ಗಟ್ಟಿಕಾಳುಗಳು. ಪುಟವಿಟ್ಟ ಚಿನ್ನದಷ್ಟೇ ಚೊಕ್ಕ ಚೆನ್ನ, ಶಾಶ್ವತವಾಗಿ ನಿಲ್ಲಬಲ್ಲ ಶ್ರೇಷ್ಠ ಕೃತಿಗಳು. ಒಂದೊಂದು ಕೃತಿಯೂ ತನ್ನದೇ ಆದ ವೈಶಿಷ್ಟ್ಯ, ಮಹತ್ವ ಪಡೆದಿವೆ ಮತ್ತು ಚಿರಂತನ ಮೌಲ್ಯವುಳ್ಳದ್ದಾಗಿವೆ. ಅವರು ಬರೆದ ಕೃತಿಗಳ ಪಟ್ಟಿ ಚಿಕ್ಕದಾಗಲು ಕಾರಣ ಆ ಕಾಲದಲ್ಲಿ ಸಾಹಿತ್ಯ ಸೃಷ್ಟಿಗಿಂತ ಕನ್ನಡ ಪ್ರಚಾರ, ಕನ್ನಡದ ಬಗ್ಗೆ ಜನರಲ್ಲಿ ಅಭಿಮಾನ ಮೂಡಿಸು

ವಂತಹ ಕಾರ್ಯ ಜರೂರಾಗಿತ್ತು. ಕನ್ನಡ ಉಳಿದರೆ ಸಾಹಿತ್ಯ ಉಳಿದೀತು, ಅದು ಅಳಿದರೆ ಸಾಹಿತ್ಯ ಅಳಿದೀತು. ಕನ್ನಡದ ಪ್ರಚಾರಕ್ಕಾಗಿ ನಿಂತ 'ಶ್ರೀ' ಯವರಿಗೆ ಸಾಹಿತ್ಯರಚನೆಗೆ ಹೆಚ್ಚು ಸಮಯ ಸಿಕ್ಕಲಿಲ್ಲ. ಅವರು ಸಾಹಿತ್ಯ ರಚನೆ ಮಾಡಿದ್ದೆಲ್ಲ ೧೯೨೬ರಿಂದ ೩೫ರವರೆಗೆ.

ಬಿ. ಎಂ. ಶ್ರೀಕಂಠಯ್ಯನವರು 'ಗದಾಯುದ್ಧ' 'ಅಶ್ವತ್ಥಾಮನ್' ಎಂಬ ಎರಡು ರುದ್ರ ನಾಟಕಗಳನ್ನು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ್ದಾರೆ. 'ಅಶ್ವತ್ಥಾಮನ್' ನಾಟಕದಲ್ಲಿ ಅವರು ಪಾಶ್ಚಾತ್ಯ ಮತ್ತು ಭಾರತೀಯ ಸಂಸ್ಕೃತಿಗಳೆರಡರ ಮಿಲನವನ್ನು ಸಾಧಿಸಿ ಹೊಸದೊಂದು ಭವ್ಯವಾದ ಸಂಸ್ಕೃತಿ ಯನ್ನು ಮೂಡಿಸಿದ್ದಾರೆ. ೧೯೩೬ರಲ್ಲಿ ಕನ್ನಡ ಛಂದಸ್ಸಿನ ಚರಿತ್ರೆ, ೧೯೪೭ರಲ್ಲಿ ಕನ್ನಡ ಸಾಹಿತ್ಯ ಚರಿತ್ರೆ, ೧೯೩೪ರಲ್ಲಿ ಅವರಿಂದ ಸಂಪಾದಿತವಾದ 'ಕನ್ನಡ ಬಾವುಟ' ಮತ್ತು ಅವರು ಬರೆದ ಕವನಗಳು ೧೯೪೩, ೧೯೪೪ರಲ್ಲಿ 'ಹೊಂಗನಸು ಗಳು' ಎಂಬ ಶೀರ್ಷಿಕೆಯನ್ನು ಪಡೆದು ಪ್ರಕಟವಾದವು. ಒಟ್ಟು ಅರವತ್ತು ಕವನಗಳಿರುವ 'ಇಂಗ್ಲೀಷ್ ಗೀತೆಗಳು' ವಿಶ್ವ ಸಂಸ್ಕೃತಿಯೊಂದಿಗೆ ಕನ್ನಡವು ಬೆಳೆಸಿಕೊಳ್ಳಬೇಕಾದ ಬಾಂಧವ್ಯದ ಕುರುಹಾಗಿಯೇ ರಚಿತವಾದದ್ದು. ಈ ಕೃತಿ ತನ್ನ ಸ್ವಂತ ಉತ್ಕೃಷ್ಟತೆಯಿಂದಾಗಿ, ಬಹುಶಃ ಅದಕ್ಕಿಂತ ಹೆಚ್ಚಾಗಿ ಐತಿಹಾಸಿಕ ಕಾರಣಗಳಿಂದಾಗಿ ನಮ್ಮ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲು ಎನಿಸಿಕೊಂಡು ಸ್ಥಿರವಾಗಿ ನಿಲ್ಲುತ್ತದೆ. ಕನ್ನಡ ಸಾಹಿತ್ಯದಲ್ಲೇ ಅತ್ಯಂತ ಫಲಪ್ರದವಾದ ಕ್ರಾಂತಿಯನ್ನು ಪ್ರಾರಂಭಿಸಿದ ಕೀರ್ತಿ ಈ ಕೃತಿಗೆ ಸಲ್ಲುತ್ತದೆ. 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ'—ಇದು ಛಂದಸ್ಸಿನ ಮತ್ತು ಸಾಹಿತ್ಯದ ಚರಿತ್ರೆಗಳಿಗಿಂತ ಬಹಳ ಮುಖ್ಯವಾದ ಪುಸ್ತಕ. ಶ್ರೀಯವರ ಭಾಷಣಗಳು, ಮುನ್ನುಡಿಗಳು, ಪುಸ್ತಕಾವಲೋಕನಗಳು, ಇವುಗಳನ್ನೆಲ್ಲ ಒಳಗೊಂಡ ಈ ಪುಸ್ತಕ ೧೯೪೪ರಲ್ಲಿ ಪ್ರಕಟವಾಯಿತು.

'ಶ್ರೀ'ಯವರು ಪ್ರಪ್ರಥಮ ಕನ್ನಡದ ಚಳುವಳಿಗಾರರು ಎಂದು ಹೇಳಿದರೂ ತಪ್ಪಾಗಲಾರದು. ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯಕ್ಕೆ ಇವರೇ ಅಡಿಗಲ್ಲು, ಸ್ತಂಭ, ದೀಪ, ಜ್ಯೋತಿ. ಕುರುಡರಂತಿದ್ದ ಕನ್ನಡಿಗರನ್ನು ಕೈಹಿಡಿದು ನಡೆಸಿದರು. ಮಾತೃಭಾಷೆ ಕನ್ನಡದಲ್ಲಿ ಅವರಿಗಿದ್ದ ಅಭಿಮಾನ ಅಪಾರ. ಶ್ರೇಷ್ಠ ಉಪನ್ಯಾಸಕರು, ಒಳ್ಳೆಯ ವ್ಯಾಸಂಗಿಗಳು, ಉತ್ತಮ ವಾಗ್ಮಿಗಳು ಆಗಿದ್ದ ಶ್ರೀಯವರು ಆಡಿದ ಮಾತೆಲ್ಲ ಸಾಹಿತ್ಯವಾಯಿತು. ಭಾಷಣದ ಕಲೆ ಅವರಿಗೆ ದೇವರು ಕೊಟ್ಟ ವರ. ಅವರು ಕರ್ನಾಟಕದ ಮೂಲೆಮೂಲೆಗಳಲ್ಲಿ,

ಹಳ್ಳಿಹಳ್ಳಿಗಳಲ್ಲಿ ಸಂಚರಿಸಿ ಭಾಷಣಗಳನ್ನು ಮಾಡಿದ್ದು ಕೇವಲ ಕೀರ್ತಿ ಸಂಪಾದಿಸುವುದಕ್ಕಲ್ಲ, ಕನ್ನಡಿಗರನ್ನು ಎಚ್ಚರಿಸುವುದಕ್ಕಾಗಿ. ಕರೆದ ಕಡೆಗಳಿಗೆಲ್ಲ ಹೋಗುತ್ತಿದ್ದರು. ಕಾರಣ ಅವರಿಗೆ ಕನ್ನಡ ನಾಡು, ನುಡಿಯ ಮೇಲೆ ಇದ್ದ ಪ್ರೇಮ.

ಸುಮಾರು ಎರಡು ದಶಕಗಳ ಕಾಲ ಕನ್ನಡ ಸಾಹಿತ್ಯ ಸಾಮ್ರಾಜ್ಯಕ್ಕೆ 'ಶ್ರೀ' ಅವರೇ ಅಧಿಪತಿಗಳಾಗಿದ್ದರು. ೧೯೨೮ರಲ್ಲಿ ಕಲ್ಬುರ್ಗಿಯಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದರು. ೧೯೩೮ರಲ್ಲಿ ಮೈಸೂರಿನ ಮಹಾರಾಜರು ಅವರಿಗೆ 'ರಾಜಸೇವಾಸಕ್ತ' ಎಂಬ ಬಿರುದು ಕೊಟ್ಟು ಗೌರವಿಸಿದರು. ಅವರಿಗೆ ಗೌರವ, ಪುರಸ್ಕಾರಗಳ ಸುರಿಮಳೆಯಾಯಿತು. ಪರಿಷತ್ತಿನ ಉಪಾಧ್ಯಕ್ಷರಾಗಿ ಚುನಾಯಿತರಾದ ಶ್ರೀಯವರು 'ಕನ್ನಡನುಡಿ' ಮಾಸಪತ್ರಿಕೆ ಪ್ರಕಟವಾಗುವುದಕ್ಕೆ ಕಾರಣಕರ್ತರಾದರು. ಪರಿಷತ್ತಿನ ಅಚ್ಚುಕೂಟಕ್ಕಾಗಿ ೬,೦೦೦ ರೂ. ದಾನಮಾಡಿದರು. ಪರಿಷತ್ತಿನ ಪರವಾಗಿ ಪ್ರವಾಸಮಾಡಿ ಸದಸ್ಯರನ್ನು ಸೇರಿಸಿದರು. ಪರಿಷತ್ತಿನ ಶಾಶ್ವತ ನಿಧಿಗೆ ಹಣ ಸಂಗ್ರಹಿಸುವಾಗ 'ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು' ಎಂದು ವಿನಯದಿಂದ ಪ್ರಾರ್ಥಿಸಿದರು. ಉತ್ಸವಗಳನ್ನು, ಸಮ್ಮೇಳನಗಳನ್ನು ನಡೆಸಿದರು.

ಶ್ರೀಕಂಠಯ್ಯನವರು ವಿಶ್ವವಿದ್ಯಾನಿಲಯದ ಕೆಲಸದಿಂದ ನಿವೃತ್ತರಾದ ೧೯೪೨ರಲ್ಲಿಯೇ ಸರ್ಕಾರ ಅವರನ್ನು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿತು. ನಂತರ ಧಾರವಾಡದ ಕೆ. ಇ. ಬೋರ್ಡ್ ಕಾಲೇಜಿನ ಪ್ರಿನ್ಸಿಪಾಲರಾದರೂ ಊರೂರು ಸುತ್ತಾಟದ ಫಲವಾಗಿ ಆರೋಗ್ಯ ಕೆಟ್ಟು ೧೯೪೬ರಲ್ಲೇ ಸ್ವರ್ಗಸ್ಥರಾದರು.

"'ಶ್ರೀ'ಯವರ ಪ್ರಭಾವವು ಗುಪ್ತಗಾಮಿನಿಯಾದ ವಾಹಿನಿಯಂತೆ ಅನೇಕ ವೃಕ್ಷಗಳಿಗೆ ನೀರೆರೆದಿದೆ" ಎಂದಿದ್ದಾರೆ ಅವರ ವಿದ್ಯಾರ್ಥಿಗಳಾಗಿದ್ದ ರಾಷ್ಟ್ರಕವಿ ಕೆ. ವಿ. ಪುಟ್ಟಪ್ಪನವರು.

"'ಶ್ರೀ'ಯವರ ಕಂಠಶ್ರೀ ಇತರರಿಗಿಲ್ಲ" ಎಂದು ಆಲೂರು ವೆಂಕಟರಾಯರು ಪ್ರಶಂಸಿಸಿದ್ದಾರೆ.

"'ಶ್ರೀ' ಒಳ್ಳೆಯ ವಾಗ್ಮಿ. ಪ್ರೇಕ್ಷಕರು ಅವರ ರೂಪಶ್ರೀ, ಕಂಠಶ್ರೀಗಳಿಗೆ ಬೆರಗಾಗುತ್ತಿದ್ದರು. ಅವರು ಉಪನ್ಯಾಸ ಪ್ರಾರಂಭಿಸಿದರೆ ಕಾಲವೂ ನಿಂತು ಹೋಗುತ್ತಿತ್ತು. ಅವರಾಡುತ್ತಿದ್ದದ್ದು ವಿಚಾರಗರ್ಭಿತ ಮಾತು. ಅವರೊಡನೆ

ಸಂಭಾಷಣೆಯೂ ಒಂದು ಅಪೂರ್ವ ಅನುಭವ' ಎಂದಿದ್ದಾರೆ ಅವರ ಶಿಷ್ಯ ಎ. ಎಸ್. ಮೂರ್ತಿರಾಯರು. ಪಂಜೆ ಮಂಗೇಶರಾಯರು ಪೂಜ್ಯಭಾವದಿಂದ ಶ್ರೀಯವರನ್ನು 'ತುಂಬಿದ ಕೊಡ' ಎಂದಿದ್ದಾರೆ.

ಪ್ರೊ|| ಮೆಕಿಂಟಾಷ್ ಅವರು ಶ್ರೀಯವರ ಉಪನ್ಯಾಸಗಳನ್ನು ಕೇಳಿ ಬಹಳವಾಗಿ ಮೆಚ್ಚಿಕೊಂಡು, "ನಾನು ಜನ್ಮಾಂತರಗಳನ್ನು ನಂಬುವುದಾದರೆ, ತಮ್ಮ ಹಿಂದಿನ ಜನ್ಮದಲ್ಲಿ ಪ್ರೊಫೆಸರ್ ಶ್ರೀಕಂಠಯ್ಯನವರು ಆಕ್ಸ್‌ಫರ್ಡಿನ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಸಾಹಿತ್ಯದ ಪ್ರೊಫೆಸರು ಆಗಿದ್ದರೆಂದು ನನಗೆ ತೋರುತ್ತದೆ" ಎಂದು ಒಮ್ಮೆ ವಂದನೆಗಳನ್ನರ್ಪಿಸಿದ್ದುಂಟು.

"'ಶ್ರೀ'ಯವರ ವಾಣಿ ರಸವಾಣಿ, ಅವರ ಹೃದಯ ಕವಿಹೃದಯ, ಕನ್ನಡದ ಕಣ್ಣು" ಎಂದು ಶ್ರೀನಿವಾಸರು ಕರೆದರು.

"ವಿದ್ಯಾರ್ಥಿಗಳನ್ನು ವಾತ್ಸಲ್ಯದಿಂದ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು" ಎಂದಿದ್ದಾರೆ ಪ್ರೊಫೆಸರ್ ಎಸ್. ವಿ. ರಂಗಣ್ಣನವರು.

ತಲೆಯಲ್ಲಿ ತುಂಬಿಕೊಂಡಿದ್ದ ಅಗಾಧಜ್ಞಾನದ ಹೊಂಬಿಸಿಲಲ್ಲಿ ಕನ್ನಡ ಸಾಹಿತ್ಯವನ್ನು ಬೆಳಗಿ, ಕನ್ನಡಿಗರಲ್ಲಿ ಅಭಿಮಾನ ತುಂಬಿ ಉಜ್ವಲಗೊಳಿಸಿದ ಬಿ. ಎಂ. ಶ್ರೀಕಂಠಯ್ಯನವರು ನಿಂತ ನೀರಾಗಿದ್ದ ಕನ್ನಡ ಸಾಹಿತ್ಯ ವಾಹಿನಿಗೆ ಹೊಸದೊಂದು ಪಾತ್ರ ಸೃಷ್ಟಿಸಿ ಅದು ಮತ್ತೆ ಹೊಸಲಾಗಿ ಹರಿಯುವಂತೆ ಮಾಡಿದರು. ಕನ್ನಡವೆಂದರೆ ಕನ್ನಡಿಗರೇ ಮುಖ ಸಿಂಡರಿಸುತ್ತಿದ್ದ ಕಾಲದಲ್ಲಿ ಕನ್ನಡ ಭಾಷೆ ಯಾವ ಭಾಷೆಗೂ ಕಡಿಮೆಯಿಲ್ಲ ಎನ್ನುವುದನ್ನು ತೋರಿಸಿ ಕೊಟ್ಟು, ಕನ್ನಡಿಗರಲ್ಲಿ ಕವಿದಿದ್ದ ಮಂಕನ್ನು ತೊಳೆದು ಹೊಸ ಕೆಚ್ಚನ್ನು ಮೂಡಿಸಿದ ಕೀರ್ತಿ ಶ್ರೀಯವರಿಗೆ ಸಲ್ಲತಕ್ಕದ್ದು. ಕನ್ನಡವೇ ಅವರ ತಾಯಿ, ಅವರ ಜೀವ, ಅವರ ಸರ್ವಸ್ವ. ಅವರ ಭಾಷೆ, ಶೈಲಿ ಧೀರೋದಾತ್ತ. ಅವರ ಬದುಕು ಬರಹ, ಅವರು ಏರಿದ ಎತ್ತರ, ತೋರಿದ ದಾರಿ, ನಿರ್ಮಿಸಿದ ಪರಂಪರೆ ಇವುಗಳನ್ನೆಲ್ಲ ಕನ್ನಡಿಗರು ಮರೆಯುವಂತಿಲ್ಲ.

'ಶ್ರೀ'ಯವರ ಹೆಸರು ಕನ್ನಡಿಗರ ನಾಲಿಗೆಯ ಮೇಲೆ ಸದಾಕಾಲ ನಲಿಯುವ ಹೆಸರು. ಇಂಥಹ ಸಾಹಿತಿ ಮತ್ತು ವ್ಯಕ್ತಿಯನ್ನು ಕನ್ನಡನಾಡು ಮತ್ತೆ ಕಾಣುವುದು ದುರ್ಲಭ. ಕನ್ನಡ ನಾಡಿನ ಮುನ್ನಡೆ, ಕನ್ನಡ ನಾಡಿನ ಸಾಂಸ್ಕೃತಿಕ ಏಕೀಕರಣ, ನಿಃಸ್ವಾರ್ಥಸೇವೆ, ಅವರ ಆಶೀರ್ವಾದದ ಬಲದಿಂದ ಕನ್ನಡಾಭಿಮಾನಿಗಳಾದ ನಾವೆಲ್ಲ ಇಂದು ಕನ್ನಡದ ಸಮೃದ್ಧಿಯನ್ನು ನೋಡುವ ಭಾಗ್ಯ ಪಡೆದಿದ್ದೇವೆ.

ದೊಡ್ಡಪ್ಪ ಬಿ. ಎಂ. ಶ್ರೀಕಂಠಯ್ಯನವರು ಮಂಡ್ಯದಲ್ಲಿದ್ದ ನಮ್ಮ ಮನೆಗೆ ಆಗಾಗ್ಗೆ ಬರುತ್ತಿದ್ದರು. ಆಗ ನಾನು ತುಂಬ ಚಿಕ್ಕವಳು. ಅವರ ದೊಡ್ಡ ತನವನ್ನು ಅರ್ಥಮಾಡಿಕೊಳ್ಳಲಾರದಷ್ಟು ಮುಗ್ಧೆ, ದಡ್ಡಿ ನಾನಾಗ. ಅವರ ಭಾವಚಿತ್ರವನ್ನು ನೋಡಿ ಅವರ ಮುಖದ ನೆನಪು ಮಾಡಿಕೊಳ್ಳಲು ಆಗಾಗ್ಗೆ ಪ್ರಯತ್ನಿಸುತ್ತೇನೆ. ಮರೆತದ್ದೇ ಅಪಾರ, ನೆನಪಿಗೆ ಬರುವುದು ಒಂದೆರಡು ಹನಿಮಾತ್ರ.

ಇಂದು ನೆನಪಿನ ಸುಳಿಯಲ್ಲಿ ತೇಲಿ ಬರುವ ದೊಡ್ಡಪ್ಪ 'ಅಣ್ಣಯ್ಯ'ನವರಿಗೆ ನಮನಗಳನ್ನು ನೀಡಿ, ಸ್ವರ್ಗಸೀಮೆಯಿಂದ ಅವರ ಆಶೀರ್ವಾದ ಪಡೆಯಲು ಹಂಬಲಿಸುವೆ.

ಆರ್ಯಾಂಬ ಪಟ್ಟಾಭಿ



ಸಂಪತ್ತು ಬಂದಾಗ ದೊಡ್ಡವರ ಮನಸ್ಸು ಕೋಮಲವಾಗಿರುತ್ತದೆ; ವಿಪತ್ತು ಬಂದಾಗ ಕಠಿಣವಾಗುತ್ತದೆ.

—ಭರ್ತೃಹರಿ

ಅಭಿಪ್ರಾಯಗಳಿಗಾಗಿ ಹೋರಾಡುವ ಅವಕಾಶ ಸಿಕ್ಕದಿದ್ದಲ್ಲಿ ಅಭಿಪ್ರಾಯ ಗಳೇ ಉಳಿಯಲಾರವು.

—ಥಾಮಸ್ ಮಾನ್

ಕಣ್ಣು ನಾವೇನಾಗಿದ್ದೇವೆಂಬುದನ್ನು ತೋರಿಸುತ್ತದೆ. ಬಾಯಿ ನಾವೇನಾಗ ಬಲ್ಲೆವೆಂಬುದನ್ನು ತೋರಿಸುತ್ತದೆ.

—ಗಾಲ್ಸ್‌ವರ್ದಿ

# ಕನ್ನಡದ ಕಣ್ವರ ಸ್ಮರಣೆ

ಬಹುಭಾಷಾವಿಶಾರದರಾಗಿ, ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ಶ್ರೇಷ್ಠ ಪ್ರಾಧ್ಯಾಪಕರಾಗಿ, ಉತ್ಕೃಷ್ಟವಾಗ್ಮಿಗಳಾಗಿ, ಕವಿಗಳಾಗಿ, ನವೋದಯ ಕನ್ನಡ ಸಾಹಿತ್ಯದ ಆಚಾರ್ಯರಾಗಿ, ಕಾಲು ಶತಮಾನದ ಕಾಲ ಕನ್ನಡ ನಾಡಿನ ಉದ್ದಗಲಕ್ಕೂ ಸಂಚರಿಸಿ ತಮ್ಮ ಕಂಠಶ್ರೀಯಿಂದ ಕನ್ನಡಿಗರಲ್ಲಿ ಭಾವೈಕ್ಯವನ್ನು ಮೂಡಿಸಿ, ಹರಿದು ಹಂಚಾದ ಕನ್ನಡ ನಾಡು ಒಂದಾಗುವ ಕನಸನ್ನು ಕಂಡು, ಕನ್ನಡದ ರಕ್ಷಾಮಣಿಯಾಗಿ ಕಂಗೊಳಿಸಿದ ಆಚಾರ್ಯ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಹೆಸರನ್ನು ಯಾವ ಕನ್ನಡ ಪ್ರೇಮಿತಾನೆ ಕೇಳಿಲ್ಲ? ಕನ್ನಡದ ಕಣ್ವರೆಂದು ಕೀರ್ತಿ ಪಡೆದ ಆಚಾರ್ಯರು ಜನ್ಮವೆತ್ತ ನೂರನೆಯ ವರ್ಷದಲ್ಲಿ ಕಾಲಿಡುತ್ತಿರುವ ಈ ಸಂದರ್ಭದಲ್ಲಿ ಅವರನ್ನೂ ನಾಡು ನುಡಿಗಳಿಗೆ ಅವರು ಸಲ್ಲಿಸಿರುವ ಸೇವೆಯನ್ನೂ ನೆನೆಸಿಕೊಳ್ಳುವುದು ಪ್ರತಿಯೊಬ್ಬ ಕನ್ನಡಿಗನ ಆದ್ಯ ಕರ್ತವ್ಯ. ಈ ರೀತಿಯ ಕರ್ತವ್ಯವನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ನೆರವೇರಿಸಿದೆ.

ಶ್ರೀಯವರು ಕನ್ನಡದ ಕೈಂಕರ್ಯವನ್ನು ಕೈಕೊಳ್ಳಬೇಕೆಂದು ಸಂಕಲ್ಪಿಸಿದಾಗ ಭಾರತದಲ್ಲಿ ಒಂದು ವಿಚಿತ್ರ ಪರಿಸ್ಥಿತಿ ಇತ್ತು. ಇಂಗ್ಲೀಷಿಗೆ ಪುರಸ್ಕಾರ, ದೇಶಭಾಷೆಗಳಿಗೆ ತಿರಸ್ಕಾರ ಇದ್ದ ಕಾಲ ಅದು. ಇದರಿಂದಾಗಿ ಕನ್ನಡದ ಸ್ಥಾನ ಮಾನಗಳನ್ನು ಎತ್ತಿ ಹಿಡಿಯಲು ಶ್ರೀಯವರು ವಿಶೇಷ ಸಿದ್ಧತೆಯನ್ನು ಮಾಡಿ ಕೊಳ್ಳಬೇಕಾಯಿತು. ಮೊದಲನೆಯದಾಗಿ ಅವರು ಇಂಗ್ಲೆಂಡಿನಿಂದ ಬಂದ ಯಾವ ಇಂಗ್ಲಿಷ್ ಪ್ರಾಧ್ಯಾಪಕನಿಗೂ ಕಡಮೆಯಲ್ಲ, ಒಂದು ಕೈ ಮೇಲು ಎನ್ನುವಂತೆ ಆ ಭಾಷೆಯ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಯೂರೋಪ್ ಖಂಡದ ಸಂಸ್ಕೃತಿಗೆ ಮೂಲವಾದ ಗ್ರೀಕ್ ಭಾಷಾ ಸಾಹಿತ್ಯ ಗಳನ್ನೂ ಸಂಸ್ಕೃತಿಯನ್ನೂ ಆಳವಾಗಿ ಅಭ್ಯಾಸ ಮಾಡಿದರು. ಈ ನಡುವೆ ಕನ್ನಡ ಭಾಷಾಸಾಹಿತ್ಯಗಳನ್ನು ಹೊಸ ಮಾರ್ಗದಲ್ಲಿ ಕೊಂಡೊಯ್ಯಬೇಕೆಂಬ ಉತ್ಕಟೇಚ್ಛೆಯಿಂದ ಎಲೆಯ ಮರೆಯ ಹೂವಿನಂತೆ ಹಳಗನ್ನಡ ನಡುಗನ್ನಡದ ಕಾವ್ಯಗಳನ್ನು ಶ್ರದ್ಧೆಯಿಂದ ಚೆನ್ನಾಗಿ ಅಭ್ಯಾಸ ಮಾಡಿ, ಅವುಗಳ ಗುಣದೋಷ ಗಳನ್ನು ಕಂಡುಕೊಂಡು, ಮುಂದೆ ಹೊಸಗನ್ನಡ ನಡೆಯಬೇಕಾದ ಮಾರ್ಗ ವನ್ನು ತಮ್ಮಲ್ಲಿಯೇ ರೂಪಿಸಿಕೊಂಡರು. ಇಂಗ್ಲಿಷ್ ಭಾಷಾಸಾಹಿತ್ಯಗಳ ಅಭ್ಯಾಸಕ್ಕೆ ಗ್ರೀಕ್ ಲ್ಯಾಟಿನ್ ಭಾಷೆಗಳು ನೆರವಾಗುವಂತೆ ಕನ್ನಡ ಭಾಷಾ

ಸಾಹಿತ್ಯಗಳ ಅಭ್ಯಾಸಕ್ಕೆ ಸಂಸ್ಕೃತ ತಮಿಳುಗಳ ನೆರವು ಅತ್ಯವಶ್ಯಕವೆಂದು ತಿಳಿದು, ಆರ್ಯಾಭಾಷಾ ಸಾಹಿತ್ಯಗಳಲ್ಲಿ ವಿಶೇಷ ಪರಿಣತಿಯನ್ನು ಸಂಪಾದಿಸಿಕೊಂಡರು. ಎಲ್ಲಕ್ಕೂ ಮಿಗಿಲಾಗಿ ಸಾಹಿತ್ಯ ಸೃಷ್ಟಿಗೆ, ರಚನೆಗೆ ಬೇಕಾದ ಚಾರಿತ್ರಿಕ ದೃಷ್ಟಿಯನ್ನು ಬೆಳೆಸಿಕೊಂಡರು. ಇಷ್ಟೆಲ್ಲ ಸಿದ್ಧತೆಯನ್ನು ಮಾಡಿಕೊಂಡ ಮೇಲೆ, ಕನ್ನಡದ ನಾಯಕರಾಗಿ ಶ್ರೀಯವರು ಹೊರಬಂದರು.

ಶ್ರೀಯವರು ತಮ್ಮ ಜೀವಿತ ಕಾಲದಲ್ಲಿ ನಾಲ್ಕು ವರ್ಷಗಳ ಕಾಲ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಪದವಿಯಲ್ಲಿದ್ದರೇ ಹೊರತು, ಇನ್ನಾವ ಅಧಿಕಾರ ಸ್ಥಾನವನ್ನೂ ಅಲಂಕರಿಸಲಿಲ್ಲ. ಅವರು ನಮ್ಮ ದೇಶದ ವಿದ್ಯಾಧಿಕಾರಿಗಳಾಗಿದ್ದರೆ ಕನ್ನಡಕ್ಕೆ ಹೆಚ್ಚಿನ ಉತ್ಕರ್ಷ ಉಂಟಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಹಾಗಾಗದಿದ್ದುದು ಕನ್ನಡಿಗರ ದುರ್ದೈವ. ಈ ಮಾತು ಹಾಗಿರಲಿ. ರಿಜಿಸ್ಟ್ರಾರ್ ಪದವಿಯಲ್ಲಿದ್ದ ನಾಲ್ಕು ವರ್ಷಗಳ ಅವಧಿಯಲ್ಲಿ ಶ್ರೀಯವರು ಕನ್ನಡ ಸ್ನಾತಕೋತ್ತರ ತರಗತಿಗಳನ್ನು ತೆರೆಯುವಂತೆ ಮಾಡಿದರು. ಶ್ರೀಯವರ ಈ ಕಾರ್ಯದಿಂದ ಕನ್ನಡದ ಕವಿಗಳ, ವಿದ್ವಾಂಸರ ಪಡೆಯೇ ಸೃಷ್ಟಿಯಾಗಲು ಅನುಕೂಲವಾಯಿತು. ಅಲ್ಲದೆ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಭಾಗ್ಯದ ಬಾಗಿಲು ತೆರೆಯುವಂತಾಯಿತು. ಕನ್ನಡ ವ್ಯಾಸಂಗಕ್ಕೆ ಇಂದಿಗೂ ಪ್ರಮಾಣಭೂತವಾಗಿ ನಿಂತಿರುವ 'ಕನ್ನಡ ಕೈಪಿಡಿ'ಯನ್ನು ಬರೆಯಿಸಿದರು. ಪೀಠಿಕೆ, ಟಿಪ್ಪಣಿ, ಶಬ್ದಕೋಶಗಳಿಂದ ಕೂಡಿ, ಜನರ ರುಚಿಶುದ್ಧಿಯನ್ನು ಸಂಸ್ಕಾರಗೊಳಿಸುವ ಶುದ್ಧ ಪಾಠಗಳನ್ನೊಳಗೊಂಡ ಹಳಗನ್ನಡ ನಡುಗನ್ನಡ ಕಾವ್ಯಸಂಗ್ರಹಗಳನ್ನು, ಆಧುನಿಕ ವಿಜ್ಞಾನ ವಿಚಾರಗಳ ತಿಳುವಳಿಕೆಯನ್ನು ಕೊಡುವ ಗ್ರಂಥಗಳನ್ನು ಪ್ರಕಟಿಸುವುದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥ ಮಾಲೆಯನ್ನು ಹೊರತರುವ ಏರ್ಪಾಟನ್ನು ಮಾಡಿದರು. ಹೊಸಗನ್ನಡದಲ್ಲಿ ಕಾವ್ಯ ರಚನೆಗಾಗಿ ಚಿನ್ನದ ಪದಕವನ್ನೂ ಸಾಹಿತ್ಯ ವ್ಯಾಸಂಗಕ್ಕಾಗಿ ವಿದ್ಯಾರ್ಥಿವೇತನಗಳನ್ನೂ ಕಲ್ಪಿಸಿದರು. ಶ್ರೀಯವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕನ್ನಡ ಪ್ರಚಾರಕ್ಕಾಗಿ 'ಕನ್ನಡ ನುಡಿ'ಯೆಂಬ ವಾರಪತ್ರಿಕೆಯನ್ನು ಸ್ಥಾಪಿಸಿದರು. ಆ ಪತ್ರಿಕೆ ಇಂದಿಗೂ ಪಕ್ಷ ಪತ್ರಿಕೆಯಾಗಿ ಪ್ರಕಟವಾಗುತ್ತಿದೆ. ಪರಿಷತ್ತಿನ ಕಾರ್ಯಗಳು ಸುಗಮವಾಗಿ ನೆರವೇರಲು ಅನುವಾಗುವಂತೆ ತಮ್ಮ ಸ್ವಂತ ಹಣದಿಂದ ಅಚ್ಚುಕೂಟವೊಂದನ್ನು ನಿರ್ಮಿಸಿದರು. ಅಲ್ಲದೆ ಕನ್ನಡ ಕಾವ, ಜಾಣ ಪರೀಕ್ಷೆಗಳನ್ನು ಏರ್ಪಡಿಸಿದರು. ಶ್ರೀಯವರು ಕೊಟ್ಟಿರುವ ದತ್ತಿಯ ಹಣ ಅಂದಿನ

ಇಪ್ಪತ್ತು ಸಾವಿರ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಇದಲ್ಲದೆ ಶ್ರೀಯವರು ಹೋದಕಡೆಗಳಲ್ಲೆಲ್ಲ ತಮ್ಮ ಉಪನ್ಯಾಸ ವೈಖರಿಯಿಂದ ಜನರಲ್ಲಿ ಸುಪ್ತವಾಗಿದ್ದ ಕನ್ನಡತನವನ್ನು ಎಚ್ಚರಗೊಳಿಸಿ, ಕರ್ನಾಟಕ ಸಂಘಗಳನ್ನು ಸ್ಥಾಪಿಸಿದರು. ಹೆಚ್ಚು ಹೇಳಿಸಿಂದೇನು? ಶ್ರೀಯವರು ಕರ್ನಾಟಕದಲ್ಲಿ ಕಾಲು ಶತಮಾನ ಕಾಲ ಸಾಹಿತ್ಯ ಸಾರ್ವಭೌಮರಂತೆ ವಿರಾಜಿಸಿದರು.

ಶ್ರೀಯವರು ಇಂಗ್ಲಿಷ್, ಕನ್ನಡ ಭಾಷಾ ಸಾಹಿತ್ಯಗಳ ಪ್ರಾಧ್ಯಾಪಕರಾಗಿ, ಪ್ರವಚನಕಾರರಾಗಿ, ಕನ್ನಡದ ಪ್ರಚಾರಕರಾಗಿ ಪ್ರಸಿದ್ಧರಾದವರು. ಇದಲ್ಲದೆ ಅವರು ಕವಿಗಳೂ ಸಂಶೋಧಕರೂ ಪ್ರಥಮದರ್ಜೆಯ ಶ್ರೇಷ್ಠ ವಿಮರ್ಶಕರೂ ಆಗಿದ್ದರು. ಆದರೆ ಅವರು ಕವಿಗಳಾಗಿ ಲೇಖಕರಾಗಿ ಹೆಚ್ಚು ಬರವಣಿಗೆಯನ್ನು ಬಿಡಲಿಲ್ಲ. ಕನ್ನಡ ಜನತೆಯನ್ನು ಎಚ್ಚರಿಸುವ ಕಾರ್ಯದಲ್ಲಿ ಮಗ್ನರಾಗಿದ್ದ ಅವರಿಗೆ ಈ ಕಡೆ ದೃಷ್ಟಿ ಹರಿಯದಿದ್ದುದು ಕನ್ನಡಿಗರ ದುರದೃಷ್ಟ. ಆದರೂ ಅವರು ರಚಿಸಿರುವ ಗ್ರಂಥಗಳು, ಮಾಡಿರುವ ಭಾಷಣಗಳು, ಇತರರ ಗ್ರಂಥ ಗಳಿಗೆ ಬರೆದಿರುವ ಮುನ್ನುಡಿಗಳು ಕನ್ನಡದ ಕೆಲಸಕ್ಕೆ ಈಗಲೂ ದಾರಿದೀಪ ಗಳಂತಿವೆ. ಅವರು ರಚಿಸಿರುವ ಕಾವ್ಯ ನಾಟಕಗಳು, ಛಂದಸ್ಸಿನ ಚರಿತ್ರೆ, ಸಾಹಿತ್ಯ ಚರಿತ್ರೆಗಳು ಗ್ರಂಥ ರೂಪದಲ್ಲಿ ದೊರಕಿದರೂ ಅವರು ಮಾಡಿರುವ ಭಾಷಣಗಳೂ ವಿಮರ್ಶೆಗಳೂ ಇತರರ ಗ್ರಂಥಗಳಿಗೆ ಬರೆದಿರುವ ಮುನ್ನುಡಿಗಳೂ ಬೇರೆ ಬೇರೆ ಕಡೆಗಳಲ್ಲಿ ಚದುರಿ ಹೋಗಿವೆ. ಹೀಗೆ ಚದುರಿಹೋಗಿದ್ದ ಶ್ರೀಯವರ ಲೇಖನಗಳನ್ನೂ ಪ್ರಕಟವಾಗಿರುವ ಗ್ರಂಥಗಳನ್ನೂ ಅಡಕವಾಗಿ ಡೆಮ್ಮಿ ಅಷ್ಟದಳದ ಎಂಟುನೂರುಎಪ್ಪತ್ತು ಪುಟಗಳಲ್ಲಿ ಸಂಗ್ರಹಿಸಿ 'ಶ್ರೀ ಸಾಹಿತ್ಯ' ವೆಂಬ ಹೆಸರಿನಿಂದ ತಮ್ಮ ಸಂಪಾದಕತ್ವದಲ್ಲಿ ಡಾ. ಹಾ. ಮಾ. ನಾಯಕರು ಕನ್ನಡ ಅಧ್ಯಯನ ಸಂಸ್ಥೆಯಿಂದ ಕೇವಲ ಹತ್ತು ರೂಪಾಯಿಗಳ ಬೆಲೆಗೆ ಪ್ರಕಟಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಶ್ರೀಯವರ ಆಪ್ತ ಶಿಷ್ಯರಾಗಿದ್ದ ಪ್ರೊ. ವಿ. ಸೀತಾರಾಮಯ್ಯನವರು ಶ್ರೀಯವರ ವ್ಯಕ್ತಿತ್ವ ಹಿರಿಮೆಗಳನ್ನು ನಿರ್ದೇಶಿ ಸುವ 'ಪರಿಚಯ-ಕಾಣಿಕೆ' ಎಂಬ ಐವತ್ತು ಮೂರು ಪುಟಗಳ ಪ್ರಶಸ್ತಿ ಲೇಖನ ವನ್ನು ಬರೆದು ಗ್ರಂಥದ ತೂಕವನ್ನು ಹೆಚ್ಚಿಸಿದ್ದಾರೆ. ಶ್ರೀಯವರ ಕಾರ್ಯರಂಗ ಮೈಸೂರು ವಿಶ್ವವಿದ್ಯಾನಿಲಯವಾಗಿದ್ದು ಈ ಗ್ರಂಥ ಕನ್ನಡ ಅಧ್ಯಯನ ಸಂಸ್ಥೆ ಯಿಂದ ಹೊರಬರುತ್ತಿರುವುದು ಅತ್ಯಂತ ಸಮುಚಿತವಾಗಿದೆ.

ಒಂದೆರಡು ಮಾತುಗಳಲ್ಲಿ ಶ್ರೀಯವರ ಕೃತಿಗಳ ಹಿರಿಮೆಯನ್ನು ಗುರುತಿಸು ವುದು ಇಲ್ಲಿ ಅಪ್ರಕೃತವಾಗಲಾರದು.

ಶ್ರೀಯವರ 'ಇಂಗ್ಲಿಷ್ ಗೀತಗಳು' ನವೋದಯ ಕಾವ್ಯಕ್ಕೆ ನಾಂದಿಯಾಗಿ, ಅಚ್ಚಗನ್ನಡದ ನುಡಿಗಟ್ಟನ್ನು ಒಳಗೊಂಡು, ನೂತನ ಭಾವಗಳಿಗೆ ತೌರಾಗಿ, ಹೊಸ ಛಂದಸ್ಸಿಗೆ ಒಂದು ಕೈಪಿಡಿಯಂತಿದೆ. ಈ ಕೃತಿ ಪ್ರಕಟವಾದೊಡನೆ ಶಿಶಿರದಲ್ಲಿ ಬಾಯಿ ಹೊಲಿದುಕೊಂಡಿದ್ದ ಅದೆಷ್ಟು ಕೋಗಿಲೆಗಳು ವಸಂತ ಬಂದಿತೆಂದು ತಿಳಿದು ಹಾಡತೊಡಗಿದವು! ಇದರ ಫಲ ಶ್ರೀಯವರಿಗೆ ಅವರ ಶಿಷ್ಯರಿಂದ 'ಕಿರಿಯ ಕಾಣಿಕೆ' ಎಂಬ ಕವನ ಸಂಗ್ರಹದ ಅರ್ಪಣೆ. 'ಹೊಂಗನಸು ಗಳು' ಎಂಬ ಕವನಸಂಗ್ರಹದಲ್ಲಿ ಕವಿಯ ಭಾರತದ, ಕನ್ನಡನಾಡು ನುಡಿಗಳ ಪ್ರೇಮ ತೀವ್ರವಾಗಿ ವ್ಯಕ್ತವಾಗಿದೆ. ಪ್ರಗಾಥದ ರಚನೆಗೆ ಮಾದರಿಯೊಂದನ್ನು ಇಲ್ಲಿ ಕಾಣಬಹುದಾಗಿದೆ. ಈ ಸಂಗ್ರಹದಲ್ಲಿರುವ 'ಶುಕ್ರಗೀತೆ'ಯಂತೂ ಭಾವೋನ್ನತಿಯಿಂದ ಕೂಡಿ ಅತ್ಯಂತ ಶ್ರೇಷ್ಠ ಕವನವೆನಿಸಿದೆ. ಇಲ್ಲಿ ಬರುವ ಕೆಲವು ಕವನಗಳಲ್ಲಿ ರಾಜರ ಗುಣಗಾನ ಹೆಚ್ಚಾಯಿತೆಂದರೆ ಅಪಾತ್ರರಲ್ಲಿ ಇದನ್ನು ಇಟ್ಟಿಲ್ಲವೆಂಬುದೇ ಈ ಆಕ್ಷೇಪಣೆಗೆ ಸಮಾಧಾನ.

ರನ್ನನ ಕೃತಿರತ್ನವೆನಿಸಿದ 'ಗದಾಯುದ್ಧ'ದಲ್ಲಿ ಹುದುಗಿದ್ದ ನಾಟಕ ವೊಂದನ್ನು ಶ್ರೀಯವರು 'ಗದಾಯುದ್ಧ ನಾಟಕಂ' ಎಂಬ ಹೆಸರಿನಿಂದ ಹೊರ ತೆಗೆದರು. ಈ ನಾಟಕ ಬೆಳಕು ಕಾಣುತ್ತಿದ್ದಂತೆಯೇ 'ರನ್ನಕವಿ ಪ್ರಶಸ್ತಿ' ಹೊರಬಿದ್ದು ಮಿಕ್ಕ ಕವಿಗಳ ಪ್ರಶಸ್ತಿ ಬರಲು ಪೀಠಿಕೆಯಾಯಿತು. ಮಹಾಭಾರತದ ಸೌಪ್ತಿಕಪರ್ವದೊಡನೆ ಹೊಂದಿಸಿಕೊಂಡು ರಚಿತವಾದ ಸಾಫೋಕ್ಲಿಸ್ ಮಹಾಕವಿಯ 'ಏಜಾಕ್ಸ್' ನಾಟಕದ ರೂಪಾಂತರವೇ 'ಅಶ್ವತ್ಥಾಮನ್.' ಹಳಗನ್ನಡದ ನುಡಿಗಟ್ಟಿನೊಡನೆ ಹದವಾದ ಸಂಸ್ಕೃತದ ಮಿಶ್ರಣ, ಛಂದಸ್ಸಿನ ವಿವಿಧ ಪ್ರಯೋಗಗಳು, ಇಲ್ಲಿನ ಗೀತಗಳ ಅಸಾಧಾರಣ ಮಾಧುರ್ಯ, ಗಂಭೀರವಾದ ನಾಟಕದ ಆವರಣ—ಇವೇ ಮೊದಲಾದ ಗುಣ ಗಳಿಂದ ಕೂಡಿ 'ಅಶ್ವತ್ಥಾಮನ್' ಕನ್ನಡ ಸಾಹಿತ್ಯದಲ್ಲಿ ಒಂದು ಕೃತಿರತ್ನವೆನಿಸಿದೆ. (ಈ ನಾಟಕದಲ್ಲಿ ಪಂಪರನ್ನರ ಪ್ರಭಾವವನ್ನು ಅಲ್ಲಲ್ಲೇ ಕಾಣಬಹುದಾಗಿದೆ. ಉದಾಹರಣೆಗೆ 'ನೇಸಱೊಡನಾ ಕೌರವನ್ ಮುಳುಗೆ' ಎಂದು ಮೊದಲಾಗುವ ಸಾಲುಗಳು 'ಕುರುಕುಲಾರ್ಕನುಂ ಅರ್ಕನುಂ ಅಸ್ತಮೆಯ್ದಿದರ್' ಎಂಬ ರನ್ನರ ಪದ್ಯವನ್ನು ನೆನಪಿಗೆ ತರುತ್ತವೆ. 'ತೆಂಗುಗರಿ ಕೊಡೆನೆಟಿಲ ಬನವಾಸಿ' ಇವೇ ಮೊದಲಾದ ಬನವಾಸಿ ವರ್ಣನೆಗೆ ಗೋಕರ್ಣದ ಕಡಲ ದಂಡೆ, ಹಾಗೂ ಪಂಪನ ಪದ್ಯಗಳು; ಅಶ್ವತ್ಥಾಮನು ನುಡಿಯುವ 'ಶೃಂಗಾರವೋ ಕರ್ಣನ್, ಸೇನಾಧಿ ಪತ್ಯಾಭಿಷೇಕಮೋ ಕರ್ಣನ್' ಎಂಬ ಸಾಲುಗಳಿಗೆ ಪಂಪನ 'ನೆತ್ತಮನಾಡಿ

ಭಾನುಮತಿ ಸೋಲ್ತೊಡೆ' ಎಂಬ ಪದ್ಯ ಪ್ರೇರಕವೆಂದು ಒಂದು ಉಪನ್ಯಾಸದಲ್ಲಿ ಶ್ರೀಯವರು ಹೇಳಿದ್ದರು.) ಈಸ್ಕಿಲಿಸ್ ಮಹಾ ಕವಿಯ ಐತಿಹಾಸಿಕ ನಾಟಕದ ಭಾಷಾಂತರವೇ 'ಪಾರಸಿಕರು.' ಸಲಾಮಿಸ್ ಯುದ್ಧದಲ್ಲಿ ಪಾರಸಿಕರ ಮೇಲೆ ಗ್ರೀಕರು ಸಾಧಿಸಿದ ವಿಜಯವನ್ನು ಈ ನಾಟಕ ಚಿತ್ರಿಸುತ್ತದೆ. ಸ್ವಾರಸ್ಯದ ವಿಷಯವೇನೆಂದರೆ ಈ ನಾಟಕದಲ್ಲಿ ಕವಿ ಗ್ರೀಕರ ವಿಜಯವನ್ನು ಪಾರಸಿಕರ ಬಾಯಿಂದ, ಹಾಡಿಸಿ ಹೊಗಳಿದ್ದಾನೆ. ಇಂಗ್ಲೀಷಿನಲ್ಲಿ ವಿಕಾರ ಹೊಂದಿರುವ ಪಾರ್ಸಿಭಾಷೆಯ ಹೆಸರುಗಳನ್ನು ಶ್ರೀಯವರು ಇಲ್ಲಿ ಸರಿಪಡಿಸಿದ್ದಾರೆ. ಈ ಮೂರು ರುದ್ರನಾಟಕಗಳು ಹೊಸಗನ್ನಡದಲ್ಲಿ ರುದ್ರನಾಟಕಗಳು ರಚಿತವಾಗಲು ದಾರಿ ಮಾಡಿಕೊಟ್ಟವು ಎಂದು ಹೇಳಿದರೆ ಅದೇನೂ ಉತ್ಪ್ರೇಕ್ಷೆಯ ಮಾತಲ್ಲ.

ಕನ್ನಡದಲ್ಲಿ ಛಂದಸ್ಸಿನ ಮೇಲೆ ದೊರಕುವ ಗ್ರಂಥಗಳಲ್ಲಿ ಹತ್ತನೆಯ ಶತಮಾನದಲ್ಲಿ ದೊರಕುವ ಒಂದನೆಯ ನಾಗವರ್ಮನ 'ಕರ್ಣಾಟಕ ಛಂದೋಂಬುಧಿ'ಯೇ ಮೊಟ್ಟಮೊದಲ ಅಧಿಕೃತ ಗ್ರಂಥ. ಇದರಲ್ಲಿ ಆರು ಅಧ್ಯಾಯಗಳಿದ್ದು, ಒಂದು ಅಧ್ಯಾಯ ಮಾತ್ರ ಕನ್ನಡ ಛಂದಸ್ಸಿನ ವಿವರಣೆಗೆ ಮೀಸಲಾಗಿದೆಯೆಂದರೆ ಸಂಸ್ಕೃತ ಛಂದಸ್ಸೇ ಕನ್ನಡ ಛಂದಸ್ಸೆಂಬ ಭಾವನೆ ಕವಿಗಳಿಗಿದ್ದಿರಬೇಕಲ್ಲವೇ? ಚಂಪೂಕಾವ್ಯಗಳ ರಚನಾ ರೀತಿ ಈ ಊಹೆಗೆ ಹೊಳಲು ಕೊಡುತ್ತದೆ. ಛಂದೋಂಬುಧಿಯಾದ ಮೇಲೆ–ಮಿಕ್ಕ ಸಣ್ಣ ಪುಟ್ಟ ಕೃತಿಗಳ ಮಾತು ಹಾಗಿರಲಿ–ಕನ್ನಡ ಛಂದಸ್ಸನ್ನೇ ಸಂಪೂರ್ಣವಾದ ರೀತಿಯಲ್ಲಿ ವಿವರಿಸುವ ಗ್ರಂಥವೆಂದರೆ 'ಕನ್ನಡ ಕೈಪಿಡಿ'ಯ ಒಂದನೆಯ ಭಾಗದಲ್ಲಿ ಅಂತರ್ಗತವಾಗಿರುವ ಶ್ರೀಯವರಿಂದ ರಚಿತವಾದ 'ಕನ್ನಡ ಛಂದಸ್ಸಿನ ಚರಿತ್ರೆ.' ಈ ಭಾಗದಲ್ಲಿ ಇದರ ರಚಕರು ವೈದಿಕ ಛಂದಸ್ಸಿನ ಸ್ವರೂಪ, ಸಂಸ್ಕೃತದ ಕೆಲವು ಛಂದಸ್ಸಿನಲ್ಲಿ ಕಾಣಬರುವ ಮಾತ್ರಾಗಣಗಳು, ಕನ್ನಡ ಛಂದಸ್ಸಿನಲ್ಲಿ ಅಂಶಗಣಗಳ ಸ್ಥಾನ, ಅಂಶಗಣ ಮಾತ್ರಾಗಣಕ್ಕೆ ತಿರುಗಿದ್ದು, ಜನಪದ ಮಟ್ಟುಗಳ ಸ್ವರೂಪ, ತಮಿಳು ಛಂದಸ್ಸಿನಿಂದ ಕನ್ನಡ ಛಂದಸ್ಸಿಗೆ ಆಗಬಹುದಾದ ಸಹಾಯ ಇವೇ ಮೊದಲಾದ ಬಹು ವಿಷಯಗಳನ್ನು ನಿರೂಪಿಸಿದ್ದಾರೆ. ಛಂದಸ್ಸಿನ ವಿಷಯದಲ್ಲಿ ಶ್ರೀಯವರ ಆಳವಾದ ಅಧ್ಯಯನ ಸಂಶೋಧನೆಗಳು ಇಲ್ಲಿ ಮಡುಗಟ್ಟಿ ನಿಂತಿವೆ. ಇತ್ತೀಚಿಗೆ ಬಂದ ಛಂದೋಗ್ರಂಥಗಳಿಗೆ ಇದು ಮಾರ್ಗದರ್ಶನಮಾಡಿದೆಯೆಂದರ ಅದೇನೂ ಅತಿಶಯೋಕ್ತಿಯಲ್ಲ.

'ಕನ್ನಡ ಕೈಪಿಡಿ'ಯ ಎರಡನೆಯ ಸಂಪುಟಕ್ಕೆ ಶ್ರೀಯವರು ಬರೆದಿರುವ 'ಕನ್ನಡ ಸಾಹಿತ್ಯ ಚರಿತ್ರೆ' ಆದಿಕಾಲದಿಂದ ಪ್ರಾರಂಭವಾಗಿ ನಾಗಚಂದ್ರನ

ವರೆಗೆ ಬಂದು ನಿಲ್ಲುತ್ತದೆ. ಸಾಹಿತ್ಯ ಚರಿತ್ರೆಯ ಈ ಭಾಗ ಪೂರ್ಣವಾಗಿದ್ದರೆ ಅದೆಂತಹ ರಸವುಣಿಸಾಗುತ್ತಿತ್ತೆಂಬುದನ್ನು ವಾಚಕರು ಊಹಿಸಿಕೊಳ್ಳಬಹುದು. ಈ ಭಾಗದಲ್ಲಿ ಕವಿಗಳ ಕಾಲದ ಚರ್ಚೆಗೆ ಲೇಖಕರು ವಿಶೇಷವಾಗಿ ಗಮನ ಕೊಟ್ಟಿಲ್ಲ; ಆದರೂ ಆ ವಿಚಾರವನ್ನು ಸಂಗ್ರಹವಾಗಿ ಹೇಳದೆ ಬಿಟ್ಟಿಲ್ಲ. ಪೀಠಿಕೆ, ಸಾಹಿತ್ಯದ ಲಕ್ಷಣ, ಸಾಹಿತ್ಯ ರಚನೆಗೆ ಆಧಾರಗಳು, ಆರ್ಯರು ನಮ್ಮ ನಾಡಿಗೆ ಬರುವ ಮುಂಚೆ ಜನಪದ ಸಾಹಿತ್ಯವಿತ್ತೇ ಎಂಬ ಚರ್ಚೆ—ಇವೇ ಮೊದಲಾದ ಅಂಶಗಳನ್ನು ನಿರೂಪಿಸಿದ ಮೇಲೆ, ಲೇಖಕರು ಕವಿಗಳ ಸಾಹಿತ್ಯ ಕೃತಿಗಳ ಪರಿಚಯಕ್ಕೆ ತೊಡಗುತ್ತಾರೆ. ನಾಗವರ್ಮನ ಕಾದಂಬರಿಯ ವಿಮರ್ಶೆ ಇಲ್ಲಿ ಸಂಗ್ರಹವಾಗಿ ಸಾರವತ್ತಾಗಿ ಬಂದಿದೆ. ಪಂಪ, ರನ್ನ, ನಾಗಚಂದ್ರರ ಕೃತಿಗಳ ಪರಿಚಯ. ವಿಮರ್ಶೆ ಸುದೀರ್ಘವಾಯಿತೆಂದು ಸಹೃದಯರಿಗೆ ತೋರಬಹುದು. ಆದರೆ ಈ ಆಕ್ಷೇಪಣೆಗೆ ಸಮಾಧಾನ ಇದು. ಕನ್ನಡದಲ್ಲಿ ಸಾಹಿತ್ಯ ಚರಿತ್ರೆಯನ್ನು ಹೊಚ್ಚ ಹೊಸದಾಗಿ ಬರೆಯ ಹೊರಟ ಆ ಕಾಲದಲ್ಲಿ, ಅಜ್ಞಾತವಾಗಿದ್ದ ಕನ್ನಡ ಕೃತಿಗಳು ಒಂದಾದ ಮೇಲೆ ಒಂದು ಹೊರಬೀಳುತ್ತಿದ್ದು, ಅವುಗಳ ಹಿರಿಮೆ ಸೊಗಸುಗಳನ್ನು ಜನರಿಗೆ ತೋರಿಸಬೇಕಾಗಿದ್ದ ಕಾರಣ ಇಲ್ಲಿ ಶ್ರೀಯವರು ಈ ಕೆಲಸವನ್ನು ಮಾಡಿದ್ದಾರೆ. ಗ್ರಂಥದ ಈ ಭಾಗ ವಿಮರ್ಶೆಯೂ ಹೌದು; ಉತ್ಕೃಷ್ಟ ಸಂಕಲನವೂ ಹೌದು.

ಶ್ರೀಯವರು ಬರೆದುದಕ್ಕಿಂತ ಮಾತನಾಡಿದ್ದೇ ಹೆಚ್ಚು- ಒಂದು ದೃಷ್ಟಿಯಿಂದ ಅದು ಕನ್ನಡಿಗರ ದುರ್ದೈವ. ಕಾರಣ ಅವರ ಬರವಣಿಗೆ ಮೊಟಕಾಯಿತು. ಅದು ಏನೇ ಇರಲಿ, ಶ್ರೀಯವರ ಮರಣೋತ್ತರದಲ್ಲಿ ಪ್ರಕಟವಾದ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಗ್ರಂಥದಲ್ಲಿ, 'ಹೆಚ್ಚಿನ ಬರಹಗಳು' ಎಂಬ ಸಂಕಲನದಲ್ಲಿ ಅವರು ಮಾಡಿದ ಭಾಷಣಗಳು, ಕಾವ್ಯದ ಗ್ರಂಥಗಳ ವಿಮರ್ಶೆಗಳು, ಕಿರಿಯ ಸಾಹಿತಿಗಳ ಪುಸ್ತಕಗಳಿಗೆ ಬರೆದ ಮುನ್ನುಡಿಗಳು ದೊರಕುತ್ತವೆ. ನಮ್ಮ ಹಳೆಯ ಸಾಹಿತ್ಯದ ಗುಣದೋಷಗಳನ್ನು ಈ ಭಾಷಣ ಲೇಖನಗಳಲ್ಲಿ ಶ್ರೀಯುತರು ವಿವೇಚಿಸಿದ್ದಾರೆ. ಹೊಸ ಸಾಹಿತ್ಯ ಗದ್ಯ ಪದ್ಯಗಳ ವಿಷಯದಲ್ಲಿ ಹೇಗೆ ಮುನ್ನಡೆದು ಬೆಳೆಯಬೇಕು, ನಮ್ಮ ಮನೆಯ ಕಿಟಕಿಗಳನ್ನು ತೆರೆದು ಪ್ರಪಂಚದ ಸಾಹಿತ್ಯದ ಬೆಳಕನ್ನು ಬರಮಾಡಿಕೊಂಡು ನಮ್ಮ ಸಾಹಿತ್ಯ ಕಣಜವನ್ನು ಹೇಗೆ ತುಂಬಿಕೊಳ್ಳಬೇಕೆಂಬುದಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ರನ್ನ, ನಾಗಚಂದ್ರ, ಕುಮಾರವ್ಯಾಸ, ಸಂಸ್ಕೃತ ನಾಟಕ, ಗರತಿಯ ಹಾಡು ಇವುಗಳಿಗೆ ಶ್ರೀಯವರು ಬರೆದಿರುವ ಮುನ್ನುಡಿಗಳು ಕವಿ ಕೃತಿಗಳ ಹಿರಿಮೆ

ಯನ್ನು ತೋರಿಸುತ್ತ ರಸಸ್ಯಂದಿಯಾಗಿವೆ. ರನ್ನನ ಕೃತಿಗಳನ್ನು ವಿಮರ್ಶಿಸುತ್ತ ಲೇಖಕರು 'ಕೊನೆಗೆ ನಿಲ್ಲುವುದು ಅಭಿಮಾನವಲ್ಲ; ಸತ್ಯ' ಎಂಬ ಎಚ್ಚರಿಕೆಯ ನುಡಿಯನ್ನು ನುಡಿದಿದ್ದಾರೆ. ಕಿರಿಯರಿಗಂತೂ ಅವರ ಪ್ರೋತ್ಸಾಹದಾಯಕವಾದ ಮಾತು ಯಾವಾಗಲೂ ಸಿದ್ಧವಾಗಿರುತ್ತಿತ್ತು. ತಮಗಿಂತಲೂ ಹಿರಿಯರಾಗಿ, ನಾಡನ್ನು ಕಟ್ಟಿದವರಲ್ಲಿ ಇವರಿಗೆ ಗೌರವವಿತ್ತು. ಈ ಭಾವನೆಗಳೆಲ್ಲ ಅವರ ಬರಹಗಳಲ್ಲಿ ವ್ಯಕ್ತವಾಗಿವೆ. ಈ ಸಂಗ್ರಹದಲ್ಲಿ 'ಸಾಕ್ರಟೀಸನ ಕೊನೆಯ ದಿನಗಳು', 'ಹಣ ಪ್ರಪಂಚ', 'ಶ್ರೀ ರಾಮಕೃಷ್ಣ ಪರಮಹಂಸ', 'ಆರೋಗ್ಯ ಮತ್ತು ಅದರ ಸಾಧನೆ', 'ನಾನಾಸಾಹೇಬ ಪೇಶ್ವೆ' (?) ಈ ಗ್ರಂಥಗಳ ಮುನ್ನುಡಿಗಳು ಬಿಟ್ಟುಹೋಗಿವೆಯೆಂದು ನನ್ನ ಎಣಿಕೆ.

ಇಂಗ್ಲಿಷ್ ಪ್ರಾಧ್ಯಾಪಕರಾದ ಶ್ರೀಯವರು ಆ ಭಾಷೆಯಲ್ಲಿ ರಚಿಸಿರುವ ಗ್ರಂಥ ಒಂದೇ—ಅದು A Hand Book of Rhetoric. ಮದರಾಸು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗಾಗಿ ರಚಿತವಾದ ಈ ಗ್ರಂಥ ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭವಾದೊಡನೆ ಹಿಂದಕ್ಕೆ ಹೋಗಬೇಕಾಯಿತು. ಆ ಕಾಲಕ್ಕೆ ಈ ವಿಷಯಕ್ಕೆ ಸಂಬಂಧಿಸಿದಂತೆ ತಿಳಿದು ಬಂದ ಅಂಶಗಳನ್ನು ಕ್ರೋಢೀಕರಿಸಿ ಸಾರವತ್ತಾದ ಶೈಲಿಯಲ್ಲಿ ಲೇಖಕರು ಈ ಗ್ರಂಥವನ್ನು ರಚಿಸಿದ್ದಾರೆ. ಈಗಲೂ ನಾವು ಈ ಗ್ರಂಥದಿಂದ ಪ್ರಯೋಜನವನ್ನು ಪಡೆಯಬಹುದಾಗಿದೆ. ಇವರ ಮಿಕ್ಕ ಇಂಗ್ಲಿಷ್ ಬರಹಗಳು ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೆ, ಮಿಥಿಕ್ ಸೊಸೈಟಿಯ ಪತ್ರಿಕೆ, ತ್ರಿವೇಣಿ ಪತ್ರಿಕೆಗಳಲ್ಲಿ ಹಂಚಿಹೋಗಿದ್ದು ವಿಮರ್ಶೆ, ಕನ್ನಡದ ನವೋದಯದ ಚಳುವಳಿಗೆ ಸಂಬಂಧಿಸಿವೆ. ಇವುಗಳಲ್ಲಿ A tragic Ravana ಎಂಬ ಲೇಖನ, ಇ.ಪಿ. ರೈಸರ ಕನ್ನಡ ಸಾಹಿತ್ಯ ಚರಿತ್ರೆ, ಕವಿರಾಜಮಾರ್ಗ, ಶ್ರೀನಿವಾಸರ ಶ್ರೀರಾಮನವಮಿ—ಈ ಕೃತಿಗಳ ವಿಮರ್ಶೆ ಮನನೀಯವಾಗಿವೆ. ಹೊಸಗನ್ನಡದ ಪುನರುತ್ಥಾನಕ್ಕೆ ಸಂಬಂಧಿಸಿದ ಲೇಖನಗಳೂ ಸಹ. ಇಂಗ್ಲಿಷ್ ಸಾಹಿತ್ಯ ರಮಣೀಯವೂ, ವಿಸ್ತಾರವೂ, ವೈವಿಧ್ಯ ಪೂರ್ಣವೂ ಆಗಿದೆ. ಅಲ್ಲದೆ ವಿಶ್ವಸಾಹಿತ್ಯದ ಅರಿವಿಗೆ ಅದು ಹೆಬ್ಬಾಗಿಲು. ಈ ಸಾಹಿತ್ಯದ ಆಳವಾದ ಅಭ್ಯಾಸದಿಂದ ನಮಗೆ ಒಂದು ಹೊಸ ನೋಟ ದೃಷ್ಟಿ ವಿಮರ್ಶನ ಶಕ್ತಿ ಲಭಿಸುತ್ತವೆಯೆಂಬುದರಲ್ಲಿ ಸಂದೇಹವಿಲ್ಲ. ವ್ಯಕ್ತಿ ಎಷ್ಟೇ ಪ್ರತಿಭಾವಂತನಾಗಿರಲಿ ಇಂಗ್ಲೀಷಿನಲ್ಲಿ ಕೃತಿರಚನೆ ಮಾಡಿದರೆ ಆ ಕಾರ್ಯ ಸಾಗರಕ್ಕೆ ಒಂದು ಕೊಡ ನೀರನ್ನು ಸುರಿದಂತೆ. ಆ ರತ್ನಾಕರನ ಘೋಷದಲ್ಲಿ ಕೃತಿಕಾರನ ಹೆಸರು ಕೇಳಿ ಬರುವುದಿಲ್ಲ. ಆದರೆ ಕನ್ನಡದಲ್ಲಿ ಕೃತಿರಚನೆ

ಮಾಡಿದರೆ ನಮ್ಮ ಕೆರೆಕಟ್ಟೆಗಳು ತುಂಬಿ, ಉತ್ತಮ ಆಹಾರ ಪಾನೀಯಗಳು ಒದಗಿ ಬಂದು ಜನರು ಉದ್ಧಾರವಾಗುತ್ತಾರೆ. ಈ ತತ್ವವನ್ನು ಬಲವಾಗಿ ನಂಬಿದ್ದ ಶ್ರೀಯವರು ತಮ್ಮ ಶಕ್ತಿಸತ್ವಗಳೆಲ್ಲವನ್ನೂ ಕನ್ನಡದ ಏಳ್ಗೆಗಾಗಿ ವಿನಿಯೋಗಿಸಿ ಕೃತಕೃತ್ಯರಾದರು.

ಒಬ್ಬ ಕೃತಿಕಾರನ ಕೃತಿಗಳ ಓಲೆಯ ಪ್ರತಿಗಳನ್ನೆಲ್ಲ ಕೂಡಿಹಾಕಿ, ವಲಯ (version) ಗಳಂತೆ ವಿಂಗಡಿಸಿ, ಸುಷ್ಠುವಾದ ಪಾಠಗಳನ್ನು ನಿಷ್ಕರ್ಷೆಮಾಡಿ, ಅಚ್ಚುಮಾಡುವುದೇ ಗ್ರಂಥಸಂಪಾದನೆಯೆಂಬ ಅಭಿಪ್ರಾಯ ಹಲವರಲ್ಲಿರುವಂತೆ ತೋರುತ್ತದೆ. ಇದು ಅರ್ಧ ಸತ್ಯ. ಏಕೆಂದರೆ ಮೇಲೆ ಹೇಳಿದ ಮಾತು ಹಳೆಯ ಕೃತಿಗಳಿಗಲ್ಲದೆ ಮುದ್ರಿತ ಕೃತಿಗಳಿಗೂ ಅನ್ವಯಿಸುತ್ತದೆ. ಒಬ್ಬ ಲೇಖಕನು ತನ್ನೊಂದು ಕೃತಿಯ ನಾಲ್ಕಾರು ಮುದ್ರಣಗಳನ್ನು ತನ್ನ ಜೀವಿತ ಕಾಲದಲ್ಲಿ ಕಂಡಿರಬಹುದು. ಅಲ್ಲದೆ ಮುದ್ರಣದಿಂದ ಮುದ್ರಣಕ್ಕೆ ಆತನು ವ್ಯತ್ಯಾಸಗಳನ್ನು ಮಾಡಿರಬಹುದು. ಅಚ್ಚಿನ ತಪ್ಪುಗಳು ಸಾಕಷ್ಟು ಉಳಿದಿರಬಹುದು. ಆತನ ಲೇಖನಗಳು ಅನೇಕ ಕಡೆ ಚದುರಿಹೋಗಿರಬಹುದು. ಲೇಖಕನ ಜೀವಿತಾವಧಿಯಾದ ಮೇಲೆ ಅವನ ಕೃತಿಗಳನ್ನು ಹೊರತರುವ ಹೊಣೆ ಹೊತ್ತವರು ಅವನ ಕೃತಿಗಳ ವಿವಿಧ ಮುದ್ರಣಗಳ ಮಾರ್ಪಾಟುಗಳು, ಅಚ್ಚಿನ ತಪ್ಪುಗಳು, ಚದುರಿಹೋಗಿರುವ ಲೇಖನಗಳನ್ನು ಸಂಗ್ರಹಿಸುವ ಹೊಣೆ—ಇವುಗಳನ್ನು ಹೊತ್ತು ಸಂಪಾದನ ಕಾರ್ಯವನ್ನು ನಡೆಸಬೇಕಾಗುತ್ತದೆ. ಈ ಮಾತು ಶ್ರೀಯವರ ಕೃತಿಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ. ತಮ್ಮ ಜೀವಿತ ಕಾಲದಲ್ಲಿ ಶ್ರೀಯವರು ತಾವು ರಚಿಸಿದ ಕಾವ್ಯ ನಾಟಕಗಳನ್ನು ನೋಡಿದ್ದರು; ಪರಿಷ್ಕರಿಸಿದ್ದರು; ಅಚ್ಚಿನ ಕರಡುಗಳನ್ನು ತಿದ್ದಿದ್ದರು. 'ಅಶ್ವತ್ಥಾಮನ್', 'ಗದಾಯುದ್ಧ ನಾಟಕಂ'—ಇವು ಅವರ ಕಣ್ಣೆದುರಿಗೇ ಎರಡು ಮೂರು ಮುದ್ರಣಗಳನ್ನು ಕ್ರಮವಾಗಿ ಪುಸ್ತಕ ರೂಪದಲ್ಲಿ ಕಂಡಿದ್ದವು. 'ಪಾರಸಿಕರು' ಪ್ರಬುದ್ಧ ಕರ್ಣಾಟಕದಲ್ಲಿ ಎರಡು ಕಂತುಗಳಲ್ಲಿ ಅಚ್ಚಾಯಿತೇ ಹೊರತು ಪುಸ್ತಕ ರೂಪದಲ್ಲಿ ಹೊರಬರಲೇ ಇಲ್ಲ. ೧೯೨೬ರ 'ಇಂಗ್ಲಿಷ್ ಗೀತಗಳು' ಹೊರ ಬಂದ ಮೇಲೆ ಅದರ ಪುನರ್ ಮುದ್ರಣಕ್ಕೆ ಶ್ರೀಯವರು ಒಪ್ಪಲಿಲ್ಲ. 'ಹೊಂಗನಸುಗಳು' ಎಂಬ ಕವನ ಸಂಗ್ರಹವನ್ನು ಶ್ರೀಯವರು ತಮ್ಮ ಅರವತ್ತನೆಯ ಹುಟ್ಟುಹಬ್ಬದಂದು ಖಾಸಗಿಯಾಗಿ ಪ್ರಕಟಿಸಿ ತಮ್ಮ ಮಿತ್ರರಿಗೆ ಹಂಚಿದ್ದರು. 'ಶಿಲಪ್ಪದಿಗಾರಂ' 'ಹಾರೈಕೆ' ಎಂಬ ಎರಡು ಬರಹಗಳು ಅದರಲ್ಲಿ ಸೇರಿರಲಿಲ್ಲ. ಒಂದೆರಡು ಕವನಗಳ ತಲೆಬರಹಗಳೂ ವ್ಯತ್ಯಾಸಗೊಂಡಿವೆ. ತಮ್ಮ ಗದ್ಯ ಬರಹ ತಾತ್ಕಾಲಿಕ

ವೆಂದು ಅವುಗಳನ್ನು ಹೊರತರಲು ಶ್ರೀಯವರು ಸಮ್ಮತಿಸಲಿಲ್ಲವಂತೆ! ಈಗ ಪ್ರಕಟವಾಗಿರುವ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಗ್ರಂಥದಲ್ಲಿ ಅವರ ಎಲ್ಲ ಬರಹಗಳೂ ಸಮಾವೇಶಗೊಂಡಿಲ್ಲ. ಕೆಲವು ಭಾಗಶಃ ಪ್ರಕಟಗೊಂಡಿವೆ. ಹೀಗಿರುವಲ್ಲಿ 'ಶ್ರೀ ಸಾಹಿತ್ಯ'ದ ಸಂಪಾದಕರು ಶ್ರೀಯವರ ಅಚ್ಚಾದ ಕೃತಿಗಳ ಆವೃತ್ತಿಗಳನ್ನು ಇಟ್ಟುಕೊಂಡು, ಅವುಗಳಲ್ಲಿ ಉಳಿದಿದ್ದ ತಪ್ಪುಗಳನ್ನು ತಿದ್ದಿ, ಪಾಠಗಳನ್ನು ಪರಿಷ್ಕರಿಸಿ, ಅನೇಕ ಕಡೆ ಚದುರಿಹೋಗಿದ್ದ ಅವರ ಲೇಖನಗಳನ್ನು ಪ್ರಯತ್ನ ಪೂರ್ವಕವಾಗಿ ಸಂಪಾದಿಸಿ ಅಚ್ಚಿಟ್ಟಿದ್ದಾರೆ. ಇಷ್ಟೇ ಅಲ್ಲದೆ ಶ್ರೀಯವರ ಇಂಗ್ಲಿಷ್ ಗ್ರಂಥವೂ ಅವರ ಇತರ ಇಂಗ್ಲಿಷ್ ಲೇಖನಗಳೂ ಈ ಸಂಪುಟದಲ್ಲಿ ಬೆಳಕನ್ನು ಕಂಡಿವೆ. ಸಂಪುಟದ ಪರಿಷ್ಕರಣ ಕಾರ್ಯವನ್ನು ಸಂಪಾದಕರು ವಿವರವಾಗಿ ವಿವರಿಸಿರುವುದರಿಂದ ಅದನ್ನು ಮತ್ತೆ ಇಲ್ಲಿ ಪುನರುಚ್ಚರಿಸಬೇಕಾಗಿಲ್ಲ. ಒಟ್ಟಿನಲ್ಲಿ ಶ್ರೀಯವರ ಕೃತಿಗಳ ಒಂದು ಅಧಿಕೃತ ಮುದ್ರಣ 'ಶ್ರೀ ಸಾಹಿತ್ಯ' ಸಂಪುಟ. ಅಲ್ಲದೆ ಇದು ಒಂದು ವಿದ್ವತ್ಸಾಹಸ; ಸಾಧನೆ; ಸಿದ್ಧಿ. ಕನ್ನಡ ಅಧ್ಯಯನ ಸಂಸ್ಥೆಯ ಪರವಾಗಿ ಅತಿ ಶ್ರದ್ಧೆಯಿಂದ ಡಾ. ಹಾ. ಮಾ. ನಾಯಕರೂ ಅವರ ಸಹೋದ್ಯೋಗಿಗಳೂ ಇದನ್ನು ಹೊರತಂದು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ಸಂಪುಟದಲ್ಲಿರುವ ವಿಷಯಗಳನ್ನು ಪ್ರತಿಯೊಬ್ಬ ಕನ್ನಡಿಗನೂ ಮನನಮಾಡಬೇಕು.

ನಮ್ಮ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕನ್ನಡದ ರಕ್ಷಾಮಣಿ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ನಿರ್ದೇಶಕರ ಬೆನ್ನ ಹಿಂದಿದ್ದು 'ಹಿರಿಯರು ನನ್ನ ಕೈಗೆ ಕೊಟ್ಟ ಪಂಜನ್ನು ನನಗೆ ಬಲ್ಲಂತೆ ಬೆಳಗಿ, ನಿಮ್ಮ ಕೈಗೆ ಕೊಟ್ಟಿದ್ದೇನೆ. ಅದು ಇನ್ನೂ ಪ್ರಜ್ವಲಿಸುವಂತೆ ಮಾಡಿ, ಕನ್ನಡದ ಕೆಲಸವನ್ನು ಮುಂದುವರೆಸಿ' ಎಂಬ ಸಂದೇಶವನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದಾರೆ.

ಒಟ್ಟಿನಲ್ಲಿ ಹೊಸಗನ್ನಡ ಸಾಹಿತ್ಯದ ವಿಷಯದಲ್ಲಿ ಹೇಳಬಹುದಾದರೆ ಶ್ರೀಯವರು ಯುಗಪುರುಷರು. ಅವರ ಕೃತಿಗಳು–ಗದ್ಯವಾಗಲೀ ಪದ್ಯವಾಗಲೀ ಹೊಸಗನ್ನಡ ಸಾಹಿತ್ಯದಲ್ಲಿ ಹೊಸ ಮಾರ್ಗವನ್ನು ತೆರೆದು ನಮ್ಮ ಸಾಹಿತ್ಯವನ್ನು ಪುಷ್ಟಿಗೊಳಿಸಿದವು. ತಮ್ಮ ಕೃತಿರಚನೆಯಿಂದ. ಅವರು ಕವಿಗಳ ಪಡೆಯನ್ನೇ ಸೃಷ್ಟಿಸಿದರು. ತಮ್ಮ ಬಾಲ್ಯದಲ್ಲಿಯೇ ಕನ್ನಡನಾಡು ನುಡಿಗಳ ಕನಸನ್ನು ಕಟ್ಟಿಕೊಂಡ ಶ್ರೀಯವರು ಅದರ ನನಸಿಗಾಗಿ ವಿಶೇಷ ಸಿದ್ಧತೆಗಳನ್ನು ಮಾಡಿಕೊಂಡು, ತಮ್ಮ ಧ್ಯೇಯಸಾಧನೆಗಾಗಿ ಕನ್ನಡನಾಡನ್ನು ಸುತ್ತಿ, ತಮ್ಮ ಕಾವ್ಯಮಯವಾದ

ಭಾಷಣಗಳಿಂದ ಮಲಗಿದ್ದ ಜನರನ್ನು ಎಚ್ಚರಿಸಿ, ಅವರಲ್ಲಿ ಭಾವೈಕ್ಯವನ್ನು ಮೂಡಿಸಿ, ಹರಿಹಂಚಾಗಿದ್ದ ಕನ್ನಡನಾಡು ಒಂದುಗೂಡುವುದಕ್ಕೆ ಪ್ರಮುಖ ಕಾರಣರಾದರು. ಶ್ರೀಯವರ ಶಿಷ್ಯನಾಗಿದ್ದುದೇ ಒಂದು ಪುಣ್ಯ ಎಂದು ನನ್ನ ಭಾವನೆ. 'ಶ್ರೀಕಾರ ಬರೆದರು ಕನ್ನಡಕಣ್ವರು ಆಕಾರಗೊಂಡೆವು ನಾವು' ಎಂದು ಹಾಡಿದ ಕವಿಯ ಮಾತು ನೂರಕ್ಕೆ ನೂರು ಸತ್ಯ. ಶ್ರೀಯವರ ಭಾಷಣ ಭಾಷಣವಾಗುತ್ತಿರಲಿಲ್ಲ; ಅದು ಕಾವ್ಯವಾಗಿರುತ್ತಿತ್ತು. ಈ ಭಾವವನ್ನು ವ್ಯಕ್ತಪಡಿಸುವ ಅವರ ಹಿರಿಯ ಶಿಷ್ಯರೊಬ್ಬರು ರಚಿಸಿರುವ ಪ್ರಶಂಸಾಪದ್ಯದಿಂದ ಈ ಲೇಖನವನ್ನು ಮುಗಿಸುತ್ತೇನೆ.

ಶ್ರೀಕಂಠಗುರುವ ಕಾವ್ಯಮ
ನಾಕರ್ಣಿಸಿ ರಸದ ಮಡುವಿನೊಳಾಟಿದನಾವಂ
ಕೇಕಿಕ ನೃತ್ಯದ್ಬರ್ಹಾ
ಲೋಕದವೋಲದುವೆ ಚಿತ್ರವರ್ಣಾಕೀರ್ಣಂ

ಎಚ್. ಎಂ. ಶಂಕರನಾರಾಯಣರಾವ್



ಸಂಪತ್ತು ಇಂದು ಬಂದು ನಾಳೆ ಇಲ್ಲವಾಗಬಹುದು. ಚಾರಿತ್ರ್ಯ ಹಾಗಿಲ್ಲ. ಅದು ಕಳವಾಗಬಹುದಾದ ಪದಾರ್ಥವಲ್ಲ.

—ಸುಭಾಷಿತ

ಕ್ರೋಧಮೂಲವಾದ ಅಜ್ಞಾನವನ್ನು ನಿವಾರಿಸಿಕೊಳ್ಳಲಾರದವನು ಎಷ್ಟೇ ಧನವಂತನಾದರೂ ಕಾಲಕ್ರಮದಲ್ಲಿ ನಿರ್ಗತಿಕನಾಗುತ್ತಾನೆ.

—ಭಾರವಿ

# ಕನ್ನಡ ಸೇವಾಸಕ್ತ ಬಿ. ಎಂ. ಶ್ರೀಯವರು
## (ದಕ್ಷಿಣ ಕನ್ನಡದಲ್ಲಿ)

'ರಾಜಸೇವಾಸಕ್ತ' ಎಂಬುದು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರಿಗೆ ಮೈಸೂರು ಮಹಾರಾಜರು ಮೆಚ್ಚಿ ಕೊಟ್ಟ ಬಿರುದು, ಅದು ವೈಯಕ್ತಿಕ. ಆದರೆ ಅನಾಥಳಾಗಿ ಬಿದ್ದಿದ್ದ ಕನ್ನಡ ಭಾಷೆಯೆಂಬ ಶಕುಂತಳೆಯನ್ನು ಸಾಕಿ ಸಲಹಿದ 'ಕನ್ನಡದ ಕಣ್ವ' ಎಂಬ ಬಿರುದು ಹಾಗೂ ಅವರ ಸಂಪೂರ್ಣ ಬದುಕು ಬರಹ ಕನ್ನಡದ ಸೇವೆಗೆ ಆಸಕ್ತವಾದುದರಿಂದ 'ಕನ್ನಡ ಸೇವಾಸಕ್ತ' ಎಂಬ ಅರ್ಥಪೂರ್ಣವಾದ ಬಿರುದು ಇವೆರಡನ್ನು ಕನ್ನಡ ಕುಲರಸಿಕರು ಸಮರ್ಪಿಸಿದರೆನ್ನಬಹುದು.

**ಕನ್ನಡ ಪ್ರಚಾರದ ಕಾಯಕ**

ಅವರ ಮನಸ್ಸು ಮಾತು ಕೃತಿ ಎಂಬ ತ್ರಿಕರಣಗಳು ಸರ್ವದಾ ಕನ್ನಡದ ಪ್ರಚಾರದ ಕಾಯಕದಲ್ಲಿ ಮಿಡಿಯುತ್ತಿದ್ದುವು ಎಂಬುದು ಒಂದು ಸಣ್ಣ ಘಟನೆಯಿಂದ ವ್ಯಕ್ತವಾಗುವುದು.

ಶ್ರೀಯವರು ೧೯೩೮ರಿಂದ ೧೯೪೨ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಅವರು ಕರ್ನಾಟಕದ ಉದ್ದಗಲಕ್ಕೂ ಸಣ್ಣ ದೊಡ್ಡ ಊರುಗಳಿಗೆ ಪರಿಷತ್ತಿನ ಪ್ರಚಾರಕ್ಕಾಗಿ ಸಂಚಾರವೆಸಗಿದ್ದರು. ಆಗ ಒಮ್ಮೆ ಮಂಗಳೂರಿಗೆ ಬಂದಿದ್ದಾಗ ಪಂಡಿತ ಮುಳಿಯ ತಿಮ್ಮಪ್ಪಯ್ಯನವರ ಮನೆಯಲ್ಲಿ ತಂಗಿದ್ದರು.

ಕನ್ನಡದ ಪ್ರಚಾರ, ಕನ್ನಡದ ಕೈಂಕರ್ಯದ ಕುರಿತಾಗಿ ಹಲವಾರು ಮಾತು ಕತೆಗಳೆಡೆಯಲ್ಲಿ ಶ್ರೀ ತಿಮ್ಮಪ್ಪಯ್ಯನವರು ಇತ್ತೀಚೆಗೆ ತಾನು ಅಮ್ಮೆಂಬಳದಲ್ಲಿರುವ "ಕನ್ನಡ ಸೇವಾ ಸಂಘ"ದ ವಾರ್ಷಿಕೋತ್ಸವಕ್ಕೆ ಅಧ್ಯಕ್ಷರಾಗಿ ಹೋಗಿ ಬಂದ ವಿಚಾರವನ್ನು ಪ್ರಸ್ತಾಪಿಸಿದರು.

೧೯೩೮ರಿಂದ ೧೯೪೪ರವರೆಗೆ ನಾನೂ ದಿ|| ತೆಕ್ಕುಂಜ ಗೋಪಾಲಕೃಷ್ಣ ಭಟ್ಟರೂ ಅಮ್ಮೆಂಬಳ ಸೋಮನಾಥ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾಗ ಆ ಊರಲ್ಲಿ ಕನ್ನಡ ಸೇವಾ ಸಂಘವೆಂಬ ಕನ್ನಡ ಸಾಹಿತ್ಯ ಪ್ರಚಾರ ಸಂಸ್ಥೆಯನ್ನು ಸ್ಥಾಪಿಸಿ, ಆದರ ಮೂಲಕ ಊರವರಿಗೆ ಕನ್ನಡದಲ್ಲಿ ಓದುವ ಸಾಹಿತ್ಯಾಸಕ್ತಿಯನ್ನು ಹುಟ್ಟಿಸುತ್ತಿದ್ದೆವು. ಧಾರವಾಡದ ಮನೋಹರ ಗ್ರಂಥಮಾಲೆ, ಲಲಿತ ಸಾಹಿತ್ಯ ಮಾಲೆಗಳಿಗೆ ಚಂದಾದಾರರಾಗಿ ಹೊಸ ಹೊಸ

ಪುಸ್ತಕಗಳನ್ನು ತರಿಸುತ್ತಾ ಕನ್ನಡ ಸೇವಾ ಸದನ ಪುಸ್ತಕ ಭಂಡಾರವನ್ನು ಸ್ಥಾಪಿಸಿದ್ದೆವು. ಅದರ ವಾರ್ಷಿಕೋತ್ಸವದ ಅಧ್ಯಕ್ಷರಾಗಿ ಮುಳಿಯ ತಿಮ್ಮಪ್ಪಯ್ಯ ನವರು ಭಾಗವಹಿಸಿದುದನ್ನು ಅವರು ಬಿ. ಎಂ. ಶ್ರೀಯವರೊಡನೆ ಪ್ರಸ್ತಾಪಿಸಿದು ದಾಗಿತ್ತು.

"ಅಮ್ಮೆಂಬಳವೆಂದರೆ ಎಲ್ಲಿ? ನಾವು ಅಲ್ಲಿಯ ಕನ್ನಡ ಸೇವಾ ಸಂಘದ ಕಾರ್ಯಕರ್ತರೊಡನೆ ವಿಚಾರವಿನಿಮಯ ಮಾಡಿ, ಅವರ ಕನ್ನಡ ಪ್ರಚಾರ ಕಾರ್ಯದಲ್ಲಿ ಪ್ರೋತ್ಸಾಹ ನೀಡಬಹುದೇ?" ಎಂದು ಶ್ರೀಕಂಠಯ್ಯನವರು ಮುಳಿಯದವರೊಡನೆ ಕೇಳಿಯೇಬಿಟ್ಟರು.

"ಅಮ್ಮೆಂಬಳವೆಂದರೆ ಮಂಗಳೂರಿನಿಂದ ೧೦–೧೨ ಮೈಲು ಮೂಡುದಿಕ್ಕಿಗೆ ಇರುವ ಕಿರುಹಳ್ಳಿ. ಅಲ್ಲಿಗೆ ಸರಿಯಾದ ವಾಹನಸೌಕರ್ಯವೂ ಇಲ್ಲ. ಇತ್ತೀಚೆಗೆ ದಿನಕ್ಕೆರಡು ಬಾರಿ ಬೆಳಗ್ಗೆ ಹೋಗಿ ಸಂಜೆ ಬರುವ ಬಸ್ಸು ಸಂಚಾರ ಆರಂಭ ವಾಗಿದೆ. ಬಸ್ಸಿಳಿದ ಮೇಲೆ ಎರಡು ಮೈಲು ಕಾಲ್ನಡೆಯಲ್ಲಿ ಹೋಗಬೇಕಾಗಿದೆ. ನನಗೆ ತೆಕ್ಕುಂಜದವರು ಸಂಬಂಧಿಕರಾದುದರಿಂದ ಅವರ ಒತ್ತಾಯಕ್ಕೆ ಮಣಿದು ನಾನು ಹೋದುದಾಗಿದೆ. ಈ ವಯಸ್ಸಿನಲ್ಲಿ ನಿಮಗೆ ಅಲ್ಲಿಗೆ ಹೋಗಲು ತುಂಬಾ ಶ್ರಮವಾಗಬಹುದು. ಅದಲ್ಲದೆ ಬಿಡುವಿಲ್ಲದ ನಿಮ್ಮ ಕಾರ್ಯಕ್ರಮಗಳಿಂದಾಗಿ ನಾಳೆ ಬೆಳಗ್ಗೆ ಇಲ್ಲಿಂದ ಹೊರಡಬೇಕಾಗಿದೆ ಎಂದೂ ಹೇಳಿದ್ದೀರಿ."

ಹೀಗೆ ಹೇಳಿ ಮುಳಿಯದವರು ಶ್ರೀಕಂಠಯ್ಯನವರಿಗೆ ಅಮ್ಮೆಂಬಳ ಕನ್ನಡ ಸೇವಾ ಸಂಘದಿಂದ ಪ್ರಕಾಶಿತವಾದ "ನವನೀತ ರಾಮಾಯಣ"ದ ಒಂದು ಪ್ರತಿಯನ್ನು ಸಮರ್ಪಿಸಿದರು.

ಈ ವಿಚಾರವನ್ನು ಮುಳಿಯದವರು ತೆಕ್ಕುಂಜ ಗೋಪಾಲಕೃಷ್ಣಭಟ್ಟ ರೊಡನೆ ತಿಳಿಸಿದರೆಂದು ಅವರು ನನಗೆ ಹೇಳಿದಾಗ ಬಿ. ಎಂ. ಶ್ರೀಯವರಿಗೆ ಕನ್ನಡ ಪ್ರಚಾರದ ಬಗೆಗೆ ಇರುವ ಕಾಳಜಿ–ಕಳಕಳಿಯ ಕಲ್ಪನೆ ನನಗೆ ಅತ್ಯಾಶ್ಚರ್ಯವಾಯಿತು.

ಕುವೆಂಪುರವರ ಕವನವನ್ನು—

"ಕನ್ನಡವೆನೆ ಕುಣಿದಾಡುವುದೆನ್ನೆದೆ
ಕನ್ನಡವೆನೆ ಕಿವಿ ನಿಮಿರುವುದು"



ಎಂದು ಸ್ವಲ್ಪ ವ್ಯತ್ಯಾಸಗೊಳಿಸಿದರೆ ಶ್ರೀಯವರ ಕನ್ನಡದ ಅತ್ಯಾಸಕ್ತಿ ಹಾಗೂ ಪ್ರೀತಿಯ ಹುಚ್ಚನ್ನು ಸರಿಯಾಗಿ ಅರ್ಥವಿಸಿದಂತಾಗುವುದು.

## ಪುತ್ತೂರು ಸಾಹಿತ್ಯೋತ್ಸವದ ಅಧ್ಯಕ್ಷತೆ

೧೯೩೦ರಿಂದ ಸುಮಾರು ೮-೧೦ ವರ್ಷಗಳ ತನಕ ದಿ|| ಮೊಳಹಳ್ಳಿ ಶಿವರಾಯರೂ ಕೋಟ ಶಿವರಾಮ ಕಾರಂತರೂ ಪುತ್ತೂರಲ್ಲಿ ದಸರಾ ಉತ್ಸವವನ್ನು ಹತ್ತು ದಿನಗಳ ತನಕ ನಡೆಸುತ್ತಾ, ಪ್ರತಿದಿನವೂ ಕನ್ನಡ ನಾಡಿನಲ್ಲಿ ಪ್ರಖ್ಯಾತರಾದ ಕನ್ನಡ ಸಾಹಿತ್ಯ ದಿಗ್ಗಜಗಳನ್ನು ಕರೆತರಿಸಿ, ಸಂಜೆ ಭಾಷಣಗಳನ್ನು ಏರ್ಪಡಿಸುತ್ತಿದ್ದರು. ಕೊನೆಯ ಒಂದೆರಡು ದಿನಗಳಲ್ಲಿ ಕನ್ನಡ ಸಾಹಿತ್ಯೋತ್ಸವವು ನಡೆಯುತ್ತಿತ್ತು. ಒಮ್ಮೆ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಸಾಹಿತ್ಯೋತ್ಸವ ನಡೆಯಿತು.

ಆ ಕಾಲಘಟ್ಟವೆಂದರೆ ಕನ್ನಡ ಸಾಹಿತ್ಯದ ನವೋದಯದಲ್ಲಿ ಕನ್ನಡ ಕವನಗಳ ಛಂದಸ್ಸು, ಪದಪ್ರಯೋಗ, ವ್ಯಾಕರಣಗಳ ಕುರಿತು ಪಂಡಿತ ಮಂಡಲಿಯಲ್ಲಿ ವಿಚಾರ ಸಂಘರ್ಷವು ಮಸಗಿ ಮಸೆಯುತ್ತಿದ್ದ ಸಂಧಿಕಾಲ. ಸಂಸ್ಕೃತ ಕನ್ನಡ ಛಂದೋಲಂಕಾರ ವ್ಯಾಕರಣಗಳ ಸೂತ್ರಗಳನ್ನು ಕಂಠಪಾಠ ಮಾಡಿದ್ದ ವಿವಿಧ ಕಲಾಪಂಡಿತರಾದ ಪಂಡಿತ ಮಂಡಲಿಯವರು ಬಿ.ಎಂ.ಶ್ರೀ, ಗೋವಿಂದ ಪೈ, ಬೇಂದ್ರೆ, ಕುವೆಂಪು, ಕಡೆಂಗೋಡ್ಲು ಅವರ ಕವನಗಳ ಪದಪ್ರಯೋಗಗಳಲ್ಲಿ ವ್ಯಾಕರಣಾಲಂಕಾರ ಛಂದೋದೋಷಗಳನ್ನು ಶಂಕಿಸಿ ಚರ್ಚಿಸುತ್ತಿದ್ದರು.

ಅದೇ ಕಾಲದಲ್ಲಿ ಮಂಗಳೂರಿನ 'ಕಂಠೀರವ' ದಸರಾ ಸಂಚಿಕೆಯಲ್ಲಿ ಉಡುಪಿ ಸೀತಾರಾಮಾಚಾರ್ಯರು "ಹೊಸಗನ್ನಡ ಕವಿತೆಯು ಶ್ಲಾಘ್ಯವಾದರೂ ಅನುಕರಣಾರ್ಹವಲ್ಲ" ಎಂಬ ಸುದೀರ್ಘ ವಿಮರ್ಶಾಲೇಖನವನ್ನು ಬರೆದಿದ್ದರು. ಇದರಿಂದ ನಾವು ಪಂಡಿತರ ಆವೇಶದ ವಾದಸರಣಿಯನ್ನು ಪತ್ತೆಹಚ್ಚಬಹುದು.

ಸಾಹಿತ್ಯಾಚಾರ್ಯ ಶ್ರೀಯವರ ಸಮರ್ಥ ಅಧ್ಯಕ್ಷತೆಯಲ್ಲಿ ಪುತ್ತೂರಲ್ಲಿ ನಡೆದ ಸಾಹಿತ್ಯೋತ್ಸವದಲ್ಲಿ ಸಂಸ್ಕೃತ ಕನ್ನಡ ಪಂಡಿತವರೇಣ್ಯರಾದ ಶಿರೋಮಣಿ ಕಡಬದ ಶಂಭುಶರ್ಮರು ಸ್ವಾಗತ ಭಾಷಣವನ್ನು ಸರಳರಗಳೆಯ ಪದ್ಯರೂಪದಲ್ಲಿ ಓದಿ ಹೇಳಿದರು. ಅದರಲ್ಲಿ ಕನ್ನಡ ನವೋದಯ ಕವನದ ಸಂಧಿಕಾಲದ ಪ್ರಸ್ತಾಪವು ಹೀಗೆ ಪ್ರತಿಪಾದಿತವಾಗಿದೆ. ಅದರ ಸ್ವಲ್ಪ ಭಾಗ ಹೀಗಿದೆ—

ಕರ್ಣಾಟದಲ್ಲಿಂದು ಸಾಹಿತ್ಯ ಸಾಮ್ರಾಜ್ಯ
ಪಟ್ಟಕ್ಕೆ ಯುವರಾಜ ಕವನವೇರಿಹುದನ್ನು
ಮುದುವರಸ ಶಬ್ದವಾದರದಿಂದ ನೋಡಿ ಹಿರಿ_
ಹಿಗ್ಗಿ ಹರಸುವ ದಿನವು......
ಈಹೊತ್ತು ಹೊಸಕವಿತೆ ವಿಶ್ವರೂಪವ ತಾಳಿ

ನಲಿದಾಡತೊಡಗಿರುವುದದರ ಭಾವಾರ್ಥವೊಂ-
ದವರ ಗವ್ಯಾರ್ಥವೊಂದದರ ವಾಚ್ಯಾರ್ಥವಿ-
ನ್ನೊಂದು ಮತ್ತೊಂದರ್ಥವರಿಯದಿದೆ......
ಛಂದಸ್ಸು ಬಂದಂತೆ ಪಾದವಿನ್ಯಾಸಗಳು
ಬಾರಿಬಾರಿಗೆ ತೋರಿ ಬೆರಗುಗೊಳಿಸುತ್ತಲಿವೆ......
ಹೊಸ ಗದ್ಯಪದ್ಯಗಳ ವಿಷಮರೂಪತೆಯೊಂದು
ವಿಷಯವೆಲ್ಲರ ಬಗೆಗೆ ವಿಷಮವಾಗುವುದಿಂದು
ಹೊಸ ಪದ್ಯಕಾವ್ಯಗಳು ವಿವಿಧ ಕಾಲಿಕ ಶಬ್ದ
ರೂಪಗಳನೊಳಕೊಂಡು ಕೆಲವಲಂಕಾರಗಳ-
ನನುಚಿತಜ್ಞತೆಯಿಂದ ಕಳೆಗೆಡಿಸಿ ತಳೆಗೊಂಡು
ಭಾವನಾ ಪ್ರಕಟನೆಯ ವಿಕಟರೂಪುಗಳಿಂದ
ಹದಗೆಟ್ಟ ಪರದೇಶಭಾಷಾನುಕೃತಿಯಿಂದ
ಸಹೃದಯರ ಹೃದಯಕ್ಕಹೃದ್ಯವಾಗುವುದಿಂದು........

ಆಗತಾನೇ ಉದಯಗೊಂಡು ಕಣ್ಣುತೆರೆದ ಹೊಸಗನ್ನಡ ಕವನಗಳ ಕುರಿತು ಸಂಶಯಗೊಂಡ ದೋಷಜ್ಞರಾದ ಪಂಡಿತರ (ವಿದ್ವಾನ್ ವಿಪಶ್ಚಿತ್ ದೋಷಜ್ಞಃ—ಅಮರಕೋಶ) ಸಂದೇಹಪರಂಪರೆಯನ್ನು ಬಿ. ಎಂ. ಶ್ರೀಯವರು ತಮ್ಮ ಅಸ್ಖಲಿತವಾದ ಅಧ್ಯಕ್ಷ ಭಾಷಣದಲ್ಲಿ ಸಮೂಲನಾಶಗೈದು, ಕಾವ್ಯ ಕವನಗಳಹೊಸರೂಪ, ಹೊಸ ಛಂದಸ್ಸು, ಹೊಸ ಭಾವ, ಹೊಸ ವಸ್ತುಗಳನ್ನು ಸಮರ್ಥಿಸಿ ವಿದ್ವಂನ್ಮಂಡಲಿಯನ್ನು ತಣಿಸಿ ತೃಪ್ತಿಗೊಳಿಸಿ ಸೈ ಸೈ ಎನ್ನಿಸಿಕೊಂಡರು.

## ಹುಟ್ಟಿದ ಹಬ್ಬಕ್ಕೆ ಗೋವಿಂದ ಪೈ ಸಂದೇಶ

೧೪-೯-೧೯೪೧ನೇ ದಿನಾಂಕದಂದು ಬಿ. ಎಂ. ಶ್ರೀಯವರ ೫೭ನೇ ಹುಟ್ಟಿದ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಮೈಸೂರು ಸಂಸ್ಥಾನದ ದಿವಾನರಾದ ಶ್ರೀ ಎನ್. ಮಾಧವರಾಯರ ಘನ ಅಧ್ಯಕ್ಷತೆಯಲ್ಲಿ ಆಚರಿಸಲ್ಪಟ್ಟಾಗ, ಕನ್ನಡ ನಾಡಿನ ಮಹಾಜನತೆಯು "ಸಂಭಾವನೆ"ಯೆಂಬ ಹೆಬ್ಬೊತ್ತಗೆಯನ್ನು ಅವರ ಘನತೆಗೆ ತಕ್ಕಂತೆ ಅದ್ದೂರಿಯಿಂದ ಸಮರ್ಪಿಸಿತು.

ಆ ದಿನ ಶ್ರೀ ಮಂಜೇಶ್ವರ ಗೋವಿಂದ ಪೈ ಕಳಿಸಿದ ಸಂದೇಶ ಇಂತಿದೆ.

"ಸಂಭಾವ್ಯರಾದ ಶ್ರೀಯವರನ್ನು ಕುರಿತು ಒಂದೆರಡು ಮಾತುಗಳಲ್ಲಿ ಹೇಳಬಹುದಾದರೆ, ಪುಣ್ಯಶ್ಲೋಕಗಳಾದ ಸಾವಿತ್ರಿದೇವಿ ಗತಪ್ರಾಣನಾದ ತನ್ನ ಪ್ರಾಣಪತಿಗೆ ಪ್ರಾಣವನ್ನೂ, ಜ್ಯೋತಿಹೀನನಾದ ತನ್ನ ಮಾವನ ಕಣ್ಣುಗಳಿಗೆ

ಜ್ಯೋತಿಯನ್ನೂ ದೊರಕಿಸಿಕೊಟ್ಟಂತೆ, 'ಶ್ರೀ'ಯವರು ಕನ್ನಡ ಸಾಹಿತ್ಯಕ್ಕೆ ಪುನರುಜ್ಜೀವನವನ್ನೂ, ಕನ್ನಡನಾಡಿಗೆ ತನ್ನನ್ನು ತಾನು ಕಾಂಬ ಹೊಸ ದೃಷ್ಟಿಯನ್ನೂ ದೊರೆಕೊಳಿಸಲಿಕ್ಕೆ ಸಾಧಿಸುತ್ತಾರೆನ್ನಬಹುದು. ಈ ಸಾಧನೆಯಲ್ಲಿ ಅವರ ತ್ಯಾಗವೂ ಉದ್ಯೋಗವೂ ಒಂದನ್ನೊಂದು ಮಿಂಚುವುದರಿಂದ, ಶ್ರೀಕಂಠಯ್ಯನವರೆಂದರೆ ಕನ್ನಡ, ಕನ್ನಡವೆಂದರೆ ಶ್ರೀಕಂಠಯ್ಯನವರು ಎಂಬಷ್ಟರ ಮಟ್ಟಿಗೆ ಅವರ ಹೆಸರು ಕರ್ನಾಟಕದ ಉದ್ದಗಲಕ್ಕೂ ತುಂಬಿ ತುರುಗುತ್ತದೆ.... ನನ್ನ ಅಭಿನಂದನದ ಈ ಸ್ನೇಹಪೂರ್ಣವಾದ ಹಣತೆಯನ್ನು ತುಳುನಾಡಿನಿಂದ ತಮ್ಮಲ್ಲಿಗೆ ತೇಲಬಿಡುತ್ತೇನೆ.

(ಕನ್ನಡನುಡಿ ವಾರಪತ್ರಿಕೆ ೧೯-೯-೧೯೪೧)

## 'ಶ್ರೀಕಂಠಯ್ಯನವರ ಹೆದ್ದಾರಿ'

ಶ್ರೀಯವರು ಏರಿದ ಎತ್ತರ, ಅವರು ಕನ್ನಡ ಕಾವ್ಯಮಾರ್ಗಕ್ಕೆ ತೋರಿದ ದಾರಿ, ನಿರ್ಮಿಸಿದ ಪರಂಪರೆಯ ಕುರಿತು ಶ್ರೀ ಕಡೆಂಗೋಡ್ಲು ಶಂಕರಭಟ್ಟರು "ಸಂಭಾವನೆ"ಯಲ್ಲಿ "ಶ್ರೀಕಂಠಯ್ಯನವರ ಹೆದ್ದಾರಿ" ಎಂಬ ದೀರ್ಘ ಲೇಖದಲ್ಲಿ ಹೀಗೆ ಪ್ರಸ್ತಾಪಿಸಿರುವರು.

"'ಶ್ರೀ' ಎಂಬುದೊಂದು ಸಂಕೇತಾಕ್ಷರವಾಗಿದೆ. ಆ ಅಕ್ಷರದಿಂದ ಸೂಚಿತರಾದ ವ್ಯಕ್ತಿಗಳ ಅಖಂಡ ಸತ್ವವೊಂದು ಆ ಅಕ್ಷರವನ್ನು ಕೇಳಿದೊಡನೆ ನಮ್ಮ ಭಾವದಲ್ಲಿ ಪ್ರತಿಬಿಂಬಿಸುವುದು ಅವರು ನಡೆದ ದಾರಿ, ಹೋದ ದಿಕ್ಕು, ಆಡಿದ ಮಾತು, ಹಾಡಿದ ಹಾಡು—ಈ ಎಲ್ಲಾ ಆ ಅಕ್ಷರದಲ್ಲಿ ಚಿತ್ರಗತವಾಗಿ ನಿಂತಿವೆ. ಉನ್ನತ ಧ್ಯೇಯ, ಉನ್ನತ ಧ್ಯಾನ, ಉನ್ನತ ದೃಷ್ಟಿ—ಇವುಗಳಿಂದ ಅವರ ಜೀವನದ ದಾರಿಯು ಹೆದ್ದಾರಿಯಾಗಿದೆ.

ಶ್ರೀಯವರನ್ನು ಕುರಿತು ಮಾತಾಡುವಾಗ ಕೈ. ವಾ. ಪಂಜೆಯವರು "ಅದೊಂದು ತುಂಬಿದ ಕೊಡ" ಎನ್ನುತ್ತಿದ್ದರು. ತುಂಬಿದ ಕೊಡ ತುಳುಕುವುದಿಲ್ಲವಷ್ಟೆ! ಆ ತುಂಬಿದ ಕೊಡದ ನೀರಿನ ಪ್ರಮಾಣವು ಕನ್ನಡಿಗರಿಗೆ ತಿಳಿಯುವಂತಾದುದು ಅವರು ನೂತನ ಸಾಹಿತ್ಯಪಂಥದ ಪ್ರವರ್ತಕರಾಗಿ ಮುಂದೆ ಬಂದುದರಿಂದ."

## ಎಲೋಸಿಯಸ್ ಕಾಲೇಜಿನಲ್ಲಿ ಬಿ. ಎಂ. ಶ್ರೀ.

ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾದ "ಶ್ರೀಸಾಹಿತ್ಯ"

ಎಂಬ ಬಿ. ಎಂ. ಶ್ರೀಯವರ ಸಮಗ್ರ ಕೃತಿ ಸಂಪುಟದಲ್ಲಿ ಶ್ರೀ ವಿ. ಸೀತಾರಾಮಯ್ಯನರು "ಬಿ. ಎಂ. ಶ್ರೀಕಂಠಯ್ಯನವರು—ಪರಿಚಯ ಕಾಣಿಕೆ" ಎಂಬ ದೀರ್ಘ ಲೇಖನದ ಅಡಿಟಿಪ್ಪಣಿಯಲ್ಲಿ ಮಂಗಳೂರು ಸೈಂಟ್ ಎಲೋಸಿಯಸ್ ಕಾಲೇಜಿಗೆ ಶ್ರೀಕಂಠಯ್ಯನವರು ಆಗಮಿಸಿದ ಕುರಿತು ಹೀಗೆ ಬರೆಯುತ್ತಾರೆ.

"ಒಂದು ಸಣ್ಣ ಸಂಗತಿ ನನ್ನ ನೆನಪಿಗೆ ಬರುತ್ತದೆ. ಎರಡನೆಯ ದಶಕ ಮುಗಿದ ಸುಮಾರಿನಲ್ಲಿ ಶ್ರೀಯವರೊಡನೆ ಮಂಗಳೂರಿಗೆ ಹೋಗುವ ಪ್ರಸಂಗ ಒದಗಿತು. ಸೈಂಟ್ ಎಲೋಸಿಯಸ್ ಕಾಲೇಜ್ ಪ್ರಿನ್ಸಿಪಾಲ್ ಫಾದರ್ ಪ್ರೊಸೆರ್ಪಿಯೊ ಅವರು ಅಲ್ಲಿ ಇಂಗ್ಲಿಷ್ ಪ್ರೊಫೆಸರ್. ಇವರು ಷೇಕ್ಸ್ ಪಿಯರ್‌ನ್ನು ಕುರಿತು ಏನೊ ಮಾತನಾಡಿದರು. ಪರಿಚಯ ಭಾಷಣದಲ್ಲಿ ಪ್ರೊಸೆರ್ಪಿಯೊ ಈ ಮಾತನ್ನು ಹೇಳಿದರು. "ಇದು ಮಂಗಳೂರಿಗೇ ಒಂದು ಪುಣ್ಯದ ದಿನ. ನಾನು ಇಟಲಿಯಿಂದ ಬಂದ ಪಾದ್ರಿ. ಹಲವು ದಿನಗಳಿಂದ ಇಲ್ಲಿ ಪಾಠ ಹೇಳುತ್ತಿದ್ದೇನೆ. ಮದರಾಸ್ ವಿಶ್ವವಿದ್ಯಾನಿಲಯದಲ್ಲಿ Rhetorie ಎಂಬ ವಿಷಯವನ್ನು ಪಠ್ಯಭಾಗವಾಗಿ ನೇಮಿಸಿದ್ದರು. ಅದರ ನೆಲಸೇನು ಎಂಬುದು ಮನಸ್ಸಿಗೆ ವಿಶದವಾಗಿ ಖಚಿತವಾಗಿ ತಿಳಿಯದಿದ್ದ ಕಾಲದಲ್ಲಿ ಪ್ರೊ. ಬಿ. ಎಂ. ಶ್ರೀಯವರ A Hand Book of Rhetorie ನನಗೆ ಸಿಕ್ಕಿ ತುಂಬಾ ಉಪಕಾರ ಮಾಡಿತು. ಆದುದರಿಂದ ಒಂದು ರೀತಿಯಲ್ಲಿ ನಾನೂ ಅವರ ಶಿಷ್ಯವರ್ಗಕ್ಕೆ ಸೇರಿದವನು."

ಈ ಮಾತಿನಿಂದ ಇಟಲಿಯ ಪಾದ್ರಿಗೆ ಬಿ. ಎಂ. ಶ್ರೀಯವರ ಮೇಲಿನ ಗೌರವ ಭಾವನೆಯು ವ್ಯಕ್ತವಾಗುವುದು.

ನಾನು ಬಾಲ್ಯಮಿತ್ರ ಶ್ರೀ ನಿರಂಜನರೊಡನೆ ೧೯೪೪ರಲ್ಲಿ ಸಾಂಗ್ಲಿ ರಬಕವಿಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹೋಗಿದ್ದಾಗ ಶ್ರೀ ಬಿ. ಎಂ. ಶ್ರೀಯವರ ಭಾಷಣವನ್ನು ಕೇಳಿದವನು. ಅವರ ಗಂಭೀರ ವ್ಯಕ್ತಿತ್ವವು ಇನ್ನೂ ನನ್ನ ಹೃದಯ ಪಟಲದಲ್ಲಿ ಅಚ್ಚಳಿಯದೆ ಉಳಿದಿದೆ.

ಅ. ಶಂ. ನಾವಡ

---

ಕಬ್ಬಿಣ ತುಕ್ಕು ಹಿಡಿದು ಹಾಳಾಗುವಂತೆ ಮನುಷ್ಯ ತನ್ನ ಅಸೂಯೆಯಿಂದ ತಾನೇ ಹಾಳಾಗುತ್ತಾನೆ.

—ಡಯೋಜನಿಸ್

# ಶ್ರೀಯುವರ ಕನ್ನಡತನ

ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು
ನಲ್ಲೆಯೊಲವ ತೆರೆದು ತಂದ
ಮಾತದಾವುದು

ಈ ಪ್ರಶ್ನೆಗೆ ಉತ್ತರ ಅಂಗ್ಲರಿಗೆ ನಲ್ಲಿಯಂತೆ ಸುಸ್ಪಷ್ಟ. ಅದು ತಾಯಿನುಡಿ
ನಾಡನುಡಿ ಎನ್ನುವುದರಲ್ಲಿ ಅನುಮಾನವಿಲ್ಲ. ತಾಯಿನುಡಿಯ ಬಗ್ಗೆ ಹೆಮ್ಮೆ
ಪಡಬಹುದಾದರೂ ಹೆರನುಡಿಯ ಬಗ್ಗೆ ಅಸಡ್ಡೆ ಅನವಶ್ಯಕ. ಅದಷ್ಟೇ ಅಲ್ಲ;

ಪಡುವ ಕಡಲ ಹೊನ್ನ ಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
ಕುಣಿಸುತಿರುವಳು ;
ಒಮ್ಮೆ ಇವಳು, ಒಮ್ಮೆ ಅವಳು,
ಕುಣಿಸುತಿರುವಳು.

ಆಂಗ್ಲ ಭಾಷೆಯೊಂದೇ ರಾಜಭಾಷೆಯಾಗಿ, ಸರ್ವಮಾಧ್ಯಮವಾಗಿ, ಮಾನ
ಮರ್ಯಾದೆಯ ಪ್ರತಿಷ್ಠೆಯ ಭಾಷೆಯಾಗಿ, ಬದುಕಿನ ಭಾಷೆಯಾಗಿ, ಅದರ
ಮೂಲಕವೇ ಸರ್ವವಿದ್ಯೆಯನ್ನು ಕಲಿತು, ಆಂಗ್ಲ ಸಾಹಿತ್ಯಾಭ್ಯಾಸದ ಮೂಲಕ
ಆತ್ಮಶ್ರೀಯನ್ನು ಕಂಡುಕೊಳ್ಳಲು ಸದಾ ಸಾಧನಾನಿರತರಾದ ಬೆಳ್ಳೂರು
ಮೈಲಾರಯ್ಯ ಶ್ರೀಕಂಠಯ್ಯನವರು ಓಜೋನ್ವಿತವೂ ಸಂಪತ್ಸಮೃದ್ಧವೂ
ವಿಶ್ವವಿಖ್ಯಾತವೂ ಆದ ಆ ಭಾಷೆಯ ಮಹಿಮೆಗೆ ಮರುಳಾದದ್ದು ಆಶ್ಚರ್ಯವಲ್ಲ
ಮಾನಾಭಿಮಾನಗಳನ್ನು ಆಂಗ್ಲರಿಗೆ ಮಾರಿಕೊಂಡು, ಅವರ ಆಳ್ವಿಕೆಗೆ ಭಾರತೀ
ಯರು ಶರಣಾಗಿದ್ದ ಸಮಯದಲ್ಲಿ ದೇಶಭಾಷೆಗಳು ಗುಲಾಮೀ ಮನೋಭಾವ
ದಿಂದ ಮೂಲೆ ಗುಂಪಾಗಿದ್ದ ದುರ್ದಿನಗಳಲ್ಲಿ ಆಳುವವರ ಭಾಷೆಯಲ್ಲಿ ಪಾರಂಗತ
ರಾಗಿ, ಅದರ ಮೂಲಕವೇ ಇಹಪರಗಳೆರಡನ್ನು ಸಾಧಿಸಲು ಅವರು ಸಂಕಲ್ಪಿ
ಸಿದ್ದು ಅಸಹಜವೇನಲ್ಲ. ಆಗಿನ ಕಾಲದಲ್ಲಿ ಶಾಲಾಕಾಲೇಜುಗಳಲ್ಲಿ ವ್ಯಾಸಂಗ
ಮಾಡುತ್ತಿದ್ದ ವಿದ್ಯಾರ್ಥಿಗಳೂ ದೇಶಭಾಷೆಯಲ್ಲಿ ಮಾತುಕತೆ ನಡೆಸುವುದು
ಅವಮಾನಕರವೆಂಬ ಭಾವನೆ ಸರ್ವತ್ರ ತಾಂಡವವಾಡುತ್ತಿದ್ದಾಗ. ಆಂಗ್ಲ

ಪ್ರಾಧ್ಯಾಪಕರು ಕನ್ನಡದಲ್ಲಿ ಮಾತಾಡುವುದೆಂದರೇನು? ಮಾತಾಡಿದ್ದಾದರೆ ಅವರು ಅಲಂಕರಿಸಿದ ಪದವಿಯನ್ನು ಅವಮಾನಿಸಿದಂತಾಗುತ್ತಿರಲಿಲ್ಲವೆ? ಉಪ್ಪು ಕೊಟ್ಟ ಭಾಷೆಯನ್ನು ಅವಹೇಳಿಸಿದಂತಾಗುತ್ತಿರಲಿಲ್ಲವೆ?

ಮೊದಮೊದಲು ಆಂಗ್ಲ ಭಾಷೆ ಶ್ರೀಯವರ ದೇಹ ಮನಸ್ಸುಗಳನ್ನು ತುಂಬಿಕೊಂಡು, ಅವರ ಬದುಕನ್ನೆಲ್ಲ ಆಕ್ರಮಿಸಿಕೊಂಡು, ಆಂಗ್ಲಮೋಹಿಯೆಂಬ ಪ್ರತೀತಿಗೂ ಪಾತ್ರರಾಗುತ್ತಾರೆ. ಕಾಲೇಜಿನಲ್ಲಿ ಬೋಧೆ, ಸಭೆಯಲ್ಲಿ ಉಪನ್ಯಾಸ ಪತ್ರಿಕೆಗಳಲ್ಲಿ ಲೇಖನ, ಕೆಳೆಯರೊಡನೆ ಸಂಭಾಷಣೆ ಎಲ್ಲವೂ ಆಂಗ್ಲ ಭಾಷೆಯಲ್ಲಿಯೇ ನಡೆಯಬೇಕು. ಮೊಸರಿನ ಮಂಗಮ್ಮನೊಡನೆ, ತರಕಾರಿ ತಿಮ್ಮಮ್ಮನೊಡನೆ, ಕೂಲಿಯಾಳು ಕೂನಣ್ಣನೊಡನೆ ಮಾತಾಡುವಾಗ ಮಾತ್ರ ಪಾದ್ರಿಗಳಂತೆ ಹರಕುಮುರುಕು, ಕನ್ನಡದಲ್ಲಿ ಮಾತಾಡುವುದು. ಇದು ವಿದ್ಯಾವಂತ ಸಮಾಜದ ಪರಿಪಾಠ. ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಉದ್ಘಾಟನ ಸಮಾರಂಭದ ಕಾರ್ಯಕ್ರಮಗಳು ಕನ್ನಡದಲ್ಲಿಯೇ ನಡೆಯುತ್ತವೆಂದು ಕಾರ್ಯಕರ್ತರು ಸೂಚನೆ ನೀಡಿದಾಗ; ಆಂಗ್ಲ ಭಾಷೆಯಲ್ಲಿ ಮಾತಾಡಲು ಅವಕಾಶ ನೀಡಲಿಲ್ಲವಾದರೆ ತಾವು ಬರುವುದಿಲ್ಲವೆಂದು ಹೇಳಿ ಶ್ರೀಯವರು ತಮ್ಮ ಛಲವನ್ನು ಮೆರೆದದ್ದು ಉಂಟು. ಅಂದಿನ ಯುಗಧರ್ಮವೇ ಅದು.

ಆಂಗ್ಲ ಭಾಷೆ ಅವರ ಉಸಿರಾದರೂ ಕನ್ನಡದ ಕಾರಣಪುರುಷರಾಗಬೇಕಾಗಿದ್ದು, ನವೋದಯದ ಸಾಹಿತ್ಯಕ್ಕೆ ಸ್ಫೂರ್ತಿಯ ಸೆಲೆಯಾಗಬೇಕಾಗಿದ್ದ ಶ್ರೀಯವರ ಚೇತನದಲ್ಲಿ ಕನ್ನಡದ ರಕ್ತ ಪ್ರವಹಿಸುತ್ತಿದ್ದು, ಮುಂಬರುವ ನಾಟಕ ಅಥವಾ ಕುಸ್ತಿ ಪ್ರದರ್ಶನಕ್ಕೆ ದೀರ್ಘಕಾಲದ ಸಾಧನೆಯ ಮೂಲಕ ಸಜ್ಜುಗೊಳ್ಳುತ್ತಿದ್ದ ಪಾತ್ರಧಾರಿ ಅಥವಾ ಪೈಲ್ವಾನನಂತೆ ಅವರು ಅಣಿಯಾಗುತ್ತಿದ್ದರೆಂಬ, ಕನ್ನಡ ಸಾಹಿತ್ಯವನ್ನಲ್ಲದೆ ತಮಿಳು ಸಾಹಿತ್ಯವನ್ನು ಸಹ ಅಭ್ಯಸಿಸುತ್ತಿದ್ದರೆಂಬ ಸಂಗತಿ ಗಮನಾರ್ಹವಾದದ್ದು. ಪಂತರನ್ನು ಕುಮಾರವ್ಯಾಸಾದಿ ಕವಿಗಳ ಕಾವ್ಯರಾಶಿಯನ್ನು ಬಸವ ಅಲ್ಲಮಾದಿ ಶಿವಶರಣರ ವಚನ ಸಾಹಿತ್ಯವನ್ನು ಓದಿ ಜೀರ್ಣಿಸಿಕೊಂಡ ನಂತರ ಅವರಿಗೆ ಹಬ್ಬವಾಗಿ, ಇನಿಯರಿಬ್ಬರನ್ನು ತೂಗಿ, ಇವಳ ಸೊಬಗನವಳಿಗೆ, ಅವಳ ಸೊಬಗನಿವಳಿಗೆ ತೊಡಿಸಿ ಕಣ್ಣಾರೆ ನೋಡುತ್ತಾರೆ, ಮನಸಾರೆ ಹಾಡುತ್ತಾರೆ.

ಕನ್ನಡ ಸಾಹಿತ್ಯದ ಅಧ್ಯಯನ ಮುಂದುವರಿದಂತೆ, ಲೋಕಾನುಭವ ಹೆಪ್ಪುಗಟ್ಟಿದಂತೆ, ದೇಶಾಭಿಮಾನ ಪ್ರಫುಲ್ಲವಾದಂತೆ, ನಾಡಿನ ಹಾಗೂ ನಾಡವರ ರಿಕ್ತಸ್ಥಿತಿ, ಮನವರಿಕೆಯಾದಂತೆ, ವೈಚಾರಿಕತೆಯ ಜತೆಗೆ ಭಾವನಾತ್ಮಕತೆಯೂ

ಅರಳಿದಂತೆ ಅವರ ಮಾತೃ ಭಾಷಾಪ್ರಜ್ಞೆ, ಮೊಳೆತು, ಕನ್ನಡತನ ಕುಸುಮಿಸು ತ್ತಡೆ, ಮೊದಮೊದಲು ಅವರಲ್ಲಿ ದೇಶ ಭಾಷೆಯ ಸ್ಪಷ್ಟ ಕಲ್ಪನೆಯಾಗಲಿ, ಭಾಷಾ ಸಮಸ್ಯೆಯ ಬಗೆಗಿನ ನಿಚ್ಚಳವಾದ ಅರಿವಾಗಲಿ ಇದ್ದಂತಿಲ್ಲ. 'ಸಾಮಾನ್ಯವಾದ ರಾಜಕಾರ್ಯಕ್ಕೂ ಇಂಡಿಯಾ ರಾಜ್ಯಕ್ಕೆಲ್ಲಾ ಸಂಬಂಧ ಪಟ್ಟ ವಿಷಯಗಳಿಗೂ ಬೇರೆ ಬೇರೆ ಪ್ರಾಂತ್ಯಗಳಿಂದ ಜನ ಕಲೆಯತಕ್ಕ ಸಭೆ ಗಳಿಗೂ ಬಳಸುವುದಕ್ಕೆ ಇಂಗ್ಲಿಷ್ ಭಾಷೆಯನ್ನು ಇಟ್ಟುಕೊಳ್ಳುವುದು; ಪ್ರಾಂತ್ಯಗಳಲ್ಲಿ ಹುಡುಗರು, ಹೆಂಗಸರು. ಒಕ್ಕಲಿಗರು ಎಲ್ಲರ ವಿದ್ಯಾಭಿವೃದ್ಧಿ ಗಾಗಿ ಆಯಾ ಜನರ ದೇಶ ಭಾಷೆಯನ್ನು ಇಟ್ಟುಕೊಳ್ಳುವುದು'[1] 'ಮುಖ್ಯ ಭಾಷೆಯಲ್ಲದಿದ್ದರೂ ತನ್ನ ಪ್ರಾಂತ್ಯದಲ್ಲಿ ತಾನು (ಕನ್ನಡ) ಉಪಭಾಷೆ ಯಾಗಿರುವಂತೆ ಆದರೂ ಮಾಡಬೇಕು'[2] ಎಂದವರು ನುಡಿಯುವಲ್ಲಿ ಆಗಿನ ಕಾಲದ ಪರಿಸ್ಥಿತಿಯ ಅಸಹಾಯಕತೆ ಅಭಿವ್ಯಕ್ತವಾಗುತ್ತದೆ.

ಮಾತೃ ಭಾಷಾಪ್ರಜ್ಞೆ, ಅವರ ಮನಸ್ಸನ್ನು ಸೂರೆಗೊಂಡಾಗ, ಅವರ ಹೃದಯವನ್ನು ಮಿಡಿದಾಗ, ಅವರ ನಾಡಿನಾಡಿಗಳಲ್ಲಿ ವಿದ್ಯುತ್ತಿನಂತೆ ಸಂಚರಿಸಿ ದಾಗ ಕನ್ನಡದ ಬಗ್ಗೆ ನಿಚ್ಚಳವಾದ ಅರಿವು ಮೂಡುತ್ತದೆ. 'ಆದರೆ ಕನ್ನಡದಲ್ಲಿ ಕಾವ್ಯಗಳನ್ನು ಬರೆಯತೊಡಗಿದ ಜೈನರು ಮತ್ತು ಬ್ರಾಹ್ಮಣರು ಇದೇ ರೀತಿ ಕರ್ಣಾಟಕದ ಶ್ರೇಯಸ್ಸನ್ನು ಕೋರಲಿಲ್ಲ. ಇವರ ಗ್ರಂಥಗಳೆಲ್ಲಾ ಮುಕ್ಕಾಲು ಪಾಲು ವಸ್ತುವಿನಲ್ಲಾಗಲಿ, ಭಾವಗಳಲ್ಲಾಗಲಿ, ಶೈಲಿಯಲ್ಲಾಗಲಿ, ಜನ ಸಾಮಾನ್ಯಕ್ಕೆ ರುಚಿಸುವಂತೆ ಬರೆಯದೆ ಇರುವುದು ವ್ಯಸನಪಡತಕ್ಕದ್ದಾಗಿದೆ'[3] ಎನ್ನುವ ಅವರ ಮಾತಿನಲ್ಲಿ ಮಾತೃ ಭಾಷಾಪ್ರಜ್ಞೆಯೂ ಸಾಮಾನ್ಯರ ಬಗ್ಗೆ ಅನುಕಂಪೆಯೂ ಎದ್ದುಕಾಣುತ್ತದೆ. 'ಲಿಂಗಾಯಿತರ ಕಾವ್ಯಗಳು ಪಾಂಡಿತ್ಯ ಸಾಲದೆ ಬಂದು ಕಣ್ಣಿಗೆ ಒಣಬರಲಾಗಿ ನಿಂತುಕೊಂಡಿವೆ'[4] ಎಂಬ ಅವರ ಅಭಿಪ್ರಾಯ ಮಾತ್ರ ವಿವಾದಾಸ್ಪದವಾಗಿದೆ. ಹಳಗನ್ನಡ ಕಾವ್ಯಗಳ ಶೈಲಿ ಯನ್ನು ಕುರಿತು ವಿವೇಚಿಸುವಾಗ ಎಲ್ಲೋ ಸಂಸ್ಕೃತ ಬರೆಯುವುದಕ್ಕೆ ಹೊರಟು, ಮರೆತು ಕನ್ನಡದ ಪ್ರತ್ಯಯಗಳನ್ನು ಹತ್ತಿಸಿದ ಹಾಗೆ ಕಾಣುತ್ತದೆ'[5]

---

[1] ಶ್ರೀ ಸಾಹಿತ್ಯ, ಪುಟ ೨೪೬.

[2] „ ೨೪೮

[3] „ ೨೪೯

[4] „ ೨೫೦

[5-6] „ ೨೫೧

ಎಂಬ ಅವರ ನಿರ್ಣಯ ಸರಿಯಾದದ್ದೇ. ನೀರಿಳಿಯದ ಗಂಟಲಿನಲ್ಲಿ ಕಡುಬನ್ನೇಕೆ ತುರುಕಬೇಕು? ಕವಿರಾಜಮಾರ್ಗದಿಂದ ಕಾಲದಿಂದ ಇತ್ತೀಚಿನವರೆಗೂ ಮಾತೃ ಭಾಷಾಪ್ರಜ್ಞೆಯ ಬಗ್ಗೆ ವಾದವಿವಾದಗಳು ನಡೆದಿವೆಯೆಂದೂ ಸಾಮಾನ್ಯ ಜನರಿಗೆ ಎಟಕುವ ರೀತಿಯಲ್ಲಿ ಕಾವ್ಯರಚನೆ ಸಾಧ್ಯವಾಗುವುದಾದರೆ ಶ್ರೀಸಾಮಾನ್ಯನ ಹಾಗೂ ನಾಡುನುಡಿಗಳ ಏಳ್ಗೆ ನಿಸ್ಸಂದಿಗ್ಧವೆಂದೂ ಅವರು ಮೇಲಿಂದಮೇಲೆ ಘೋಷಿಸುವಲ್ಲಿ ಅವರ ಕನ್ನಡತನ ಪ್ರಕಟವಾಗುತ್ತದೆ. 'ಪುಟ್ಟವಾಗಿಯೂ ಇಂಪಾಗಿಯೂ ತಿರುಳುಳ್ಳವಾಗಿಯೂ ಇರುವ ಕನ್ನಡ ಮಾತುಗಳನ್ನು ಮೂಲೆಗೆ ತಳ್ಳಿ, ಎರಡು ಮೂರು ಪಾದ ಉದ್ದವಾದ ಸಂಸ್ಕೃತ ಸಮಾಸಗಳ ಆಡಂಬರದಿಂದ ಅನ್ಯಾಯವಾಗಿ ಭಾಷೆಯನ್ನು ಹಿಂದುಮಾಡಿದರಲ್ಲ!'[6] ಎಂದು ಮರಗುತ್ತಾರೆ. ಅವರು ಮತ್ತೊಂದು ಕಡೆ 'ಉತ್ತಮ ಗ್ರಂಥಗಳೆಂದು ಹೆಸರು ಪಡೆದುವುಗಳಲ್ಲಿ ಯಾವುದನ್ನು ತೆಗೆದರೂ ಒಡನೆಯೆ ಸಂಸ್ಕೃತ ಶೈಲಿ ಮತ್ತು ಸಂಸ್ಕೃತ ಪದಗಳ ಅಬ್ಬರವೇ ಹೊರತು ನಮ್ಮ ಕನ್ನಡವನ್ನು ಕಾಣಬೇಕಾದರೆ, ಮರಳಿನಲ್ಲಿ ಚಿನ್ನದ ಅದಿರುಗಳನ್ನು ಹುಡುಕಬೇಕಾಗುವುದು. ಕನ್ನಡದಲ್ಲಿ ಆಕ್ಕರೆಯುಳ್ಳವರಿಗೆ ಇದು ರುಚಿಸುವುದಿಲ್ಲ'[7]ವೆಂದು ಹೇಳುತ್ತಾರೆ. ಬರುಬರುತ್ತ ಶ್ರೀಯವರ ಕನ್ನಡತನ ಹೇಗೆ ವಿಶ್ವರೂಪಿಯಾಗಿ ಕಾಣಿಸಿಕೊಳ್ಳುತ್ತದೆನ್ನುವುದು ಈ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

ಆಂಗ್ಲ ಭಾಷೆಗೆ ಸರ್ವತ್ರ ಸರ್ವಮಾನ್ಯತೆ ಇದ್ದ ಕಾಲದಲ್ಲಿ ಆಂಗ್ಲ ಪ್ರಾಧ್ಯಾಪಕರು ಕನ್ನಡದ ಕಡೆ ಹೊರಳಿದ್ದೇ ಸೋಜಿಗ. ಅದು ಕನ್ನಡದ ಭಾಗ್ಯವೂ ಆಹುದು. ಸ್ವಾತಂತ್ರ್ಯ ಚಳುವಳಿ ಅದೇ ತಾನೇ ಕಾವೇರುತ್ತಿದ್ದ ಕಾಲ. ಆಂಗ್ಲ ಮೋಹಿಗಳ ದುರುದುಂಬಿತನದಿಂದಾಗಿ ಕನ್ನಡ ಸೊರಗಿ ಸೊಪ್ಪಾಗುತ್ತಿದ್ದ ಕಾಲ. ಆಚಾರ ವಿಚಾರ, ವೇಷಭೂಷಣ ಚಾಳಿಚರ್ಯೆ ವ್ಯವಹಾರಗಳಲ್ಲೆಲ್ಲ ಆಂಗ್ಲತನ ಮೆರೆಯುತ್ತಿದ್ದ ಕಾಲ. ವಿದ್ಯಾವಂತರಲ್ಲಿ ಸ್ವರಾಜ್ಯತತ್ತ್ವ ರೂಪಿಕ್ಕುತ್ತಿದ್ದ ಕಾಲ. ದೇಶ ಭಾಷಾಪ್ರಜ್ಞೆಯ ವಿಕಾಸಕ್ಕೆ ಸ್ವರಾಜ್ಯಾಕಾಂಕ್ಷೆ ಕಾರಣವಾಗಿ, ಆಂಗ್ಲ ಭಾಷಾಸಾಹಿತ್ಯಗಳ ಸಮ್ಮೋಹಿನೀ ವಿದ್ಯೆಗೆ ಮರುಳಾಗದೆ, ಅವುಗಳಿಂದಲೇ ಪಾಠ ಕಲಿತು, ಅವುಗಳ ಬೆಳಕಿನಲ್ಲಿ ದಾರಿಗುರಿಗಳನ್ನು ಕಂಡುಕೊಂಡು ಅವುಗಳಿಂದ ಪಡೆದ ಶಕ್ತಿತೇಜಸ್ಸುಗಳಿಂದಲೇ ಆತ್ಮೋರ್ಜೆಯನ್ನು ವೃದ್ಧಿಪಡಿಸಿಕೊಂಡ ಆಂಗ್ಲ ಭಾಷಾಪ್ರಾಧ್ಯಾಪಕರೇ ಕುನುಗಿ ಕುಸಿದು ಭೂಗತ

---

[7] ಶ್ರೀ ಸಾಹಿತ್ಯ, ಪುಟ ೫೮೫

ವಾಗಲಿದ್ದ ದೇಶಭಾಷೆಗಳನ್ನು ವರಾಹಸ್ವಾಮಿಯಂತೆ ಮೇಲೆತ್ತಿ, ಅವುಗಳ ಪುನರುಜ್ಜೀವನಕ್ಕೆ ಬದ್ಧಕಂಕಣರಾಗುತ್ತಾರೆ. ದೇಶಭಾಷೆಗಳ ಪುನರುತ್ಥಾನದ ಹಾಗೂ ಕಾಯಕಲ್ಪ ಚಿಕಿತ್ಸೆಯ ಮೂಲಕವೇ ಜನತೆಯನ್ನು ದಾಸ್ಯಜಡತೆಯಿಂದುದ್ಧರಿಸಿ ಅವರ ಆತ್ಮಾಭಿಮಾನವನ್ನು ಕೆರಳಿಸಿ, ಸ್ವಾತಂತ್ರ್ಯಾಂದೋಳನವನ್ನು ತೀವ್ರಗೊಳಿಸಬಹುದೆಂಬ ಮಕಾಲೆಯ ದುಷ್ಟೋದ್ದೇಶವನ್ನು ವಿಫಲ ಅರಿವು ಅವರಲ್ಲಿ ಮೂಡುತ್ತದೆ.

ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದಾಗಿ ರಾಷ್ಟ್ರದ ಹಾಗೂ ರಾಷ್ಟ್ರಪುರುಷನ ಪರಿಸ್ಥಿತಿ ಮನೋಧರ್ಮಗಳು ಪರಿವರ್ತನೆಗೊಂಡು ಜನತೆಯಲ್ಲಿ ಹೊಸ ಆಶೆ ಆಕಾಂಕ್ಷೆಗಳು ಮೂಡಿ ಹೊಸ ಬದುಕು ಅನಿವಾರ್ಯವಾದ್ದರಿಂದ. ಸಾಮಾಜಿಕ ವಾತಾವರಣದಲ್ಲಿ ಸಂಕ್ಷೋಭೆ ತಲೆಯೆತ್ತಿದುದರಿಂದ ಹಳೆಯ ಭಾಷೆ ನವಯುಗದ ಆವಶ್ಯಕತೆಯನ್ನು ಪೂರೈಸಲಾರದೆಂದು ಅವರು ಬಗೆಯುತ್ತಾರೆ. ಸಮರ ಸಿದ್ಧತೆಯೆಂತೊ ಅಂತೆಯೇ ಶ್ರೀಯವರು ಪೂರ್ವಸಿದ್ಧತೆಗೆ ತೊಡಗುತ್ತಾರೆ. ೧೯೧೧ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ವಾರ್ಷಿಕ ಸಭೆಯಲ್ಲಿ ಅವರು ಮಾಡಿದ ಉಪನ್ಯಾಸ ಪೂರ್ವಸಿದ್ಧತೆಗೆ ನಾಂದಿಯಂತಿದೆ, ಗೆಜ್ಜೆಪೂಜೆಯಂತಿದೆ. 'ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು; ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯ ಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು'[8] ಎಂದವರು ಘೋಷಿಸಿ, ಕನ್ನಡದಲ್ಲಿ ಮನೆಮಾಡಿಕೊಂಡಿರುವ ದೋಷಗಳನ್ನು ಉಲ್ಲೇಖಿಸಿ, ಅವುಗಳಿಗೆ ಪರಿಹಾರಗಳನ್ನು ಸೂಚಿಸುತ್ತಾರೆ. ಒಂದಾನೊಂದು ಕಾಲದಲ್ಲಿ ಸಂಸ್ಕೃತದಿಂದ ಕನ್ನಡಕ್ಕೆ ಅನುಕೂಲವಾದದ್ದು ನಿಜ. ಆದರೆ ಸಾಂಸ್ಕೃತಿಕ ದೃಷ್ಟಿಯಿಂದ ಅವೆರಡೂ ಪರಸ್ಪರ ಭಿನ್ನವೆನ್ನುವಂತಿಲ್ಲ. ಪಾಶ್ಚಾತ್ಯ ಸಂಸ್ಕೃತಿಯಾದರೋ ತೀರ ಭಿನ್ನವಾದದ್ದು. 'ಈಗ ದೈವಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ ಇಂಗ್ಲಿಷಿನ ಪೋಷಣೆಯಲ್ಲೂ ಅದನ್ನು (ಕನ್ನಡವನ್ನು) ಬೆಳೆಸಬೇಕು'[9] ಎಂದವರು ನಾಡನುಡಿ ಅಭಿಮಾನಿಗಳಿಗೆ ಕರೆಕೊಡುತ್ತಾರೆ. ಅವರೆಂದಂತೆ ಆಂಗ್ಲರ ಹಾಗೂ ಆಂಗ್ಲ ಸಾಹಿತ್ಯದ ಆಕ್ರಮಣ ದೈವಯತ್ನವೇ ಸರಿ. ಆಂಗ್ಲ ಸಾಹಿತ್ಯದ ಸಂಪರ್ಕ

---

[8] ಶ್ರೀ ಸಾಹಿತ್ಯ, ಪುಟ ೨೫೦

[9] ,, ೨೫೪

ಕನ್ನಡ ಸಾಹಿತ್ಯದ ಪುನರುತ್ಥಾನಕ್ಕೆ ನಿಮಿತ್ತವಾಯಿತೆಂಬುದರಲ್ಲಿ ಸಂದೇಹವೇ ಇಲ್ಲ. ಹಿಂದೂ ಭಾರತ ಉಳಿಯಲೂ ಜಾತಿವರ್ಣಗಳ ಹಾನಿಕಾರಕ ಉಪದ್ರವದ ತೀವ್ರತೆ ತಿಳಿಯುಯುವಂತಾಗಲೂ ಆಂಗ್ಲರ ಆಳ್ವಿಕೆಯೇ ಕಾರಣವೆಂಬುದೂ ನಿಜವೇ.

ಹೊಸ ಆವಶ್ಯಕತೆಗಳನ್ನು ಪೂರೈಸಬೇಕಾದ ಭಾಷೆಯ ಸ್ವರೂಪ ಲಕ್ಷಣಗಳು ಹೇಗಿರಬೇಕೆಂಬುದರ ಬಗ್ಗೆಯೂ ಅವರು ಚಿಂತನೆ ನಡಸುತ್ತಾರೆ. ಕವಿಯ ಸೃಷ್ಟಿಕಾರ್ಯಕ್ಕೆ ಮಾಧ್ಯಮವಾಗಬೇಕಾದ ಭಾಷೆ ಸುಂದರವಾಗಿರಬೇಕಷ್ಟೆ. ಈ ದೃಷ್ಟಿಯಿಂದ ಅವರು ಕನ್ನಡಕ್ಕೊಂದು ಕಟ್ಟನ್ನು ವಿಧಿಸುತ್ತ, ಪೂರ್ವರೂಪ, ರೂಢಿರೂಪ, ಗ್ರಾಮ್ಯ ರೂಪಗಳಲ್ಲಿ ಯಾವುದು ಗ್ರಾಹ್ಯ, ಯಾವುದು ಅಗ್ರಾಹ್ಯ, ಕನ್ನಡ ಸಂಸ್ಕೃತ ಮತ್ತು ಅನ್ಯದೇಶ್ಯ ಶಬ್ದಗಳಲ್ಲಿ ಯಾವನ್ನು ಯಾವ ಪ್ರಮಾಣದಲ್ಲಿ ಬಳಸಿಕೊಳ್ಳಬೇಕು, ವ್ಯಾಕರಣ ರೂಪಗಳಲ್ಲಿ ಯಾವುವು ಸಿಂಧು, ಯಾವುವು ಸಿಂಧುವಲ್ಲ, ಇತ್ಯಾದಿ ವಿಷಯಗಳನ್ನು ವಿವರಿಸುತ್ತಾರೆ. ಗ್ರಾಮ್ಯ ರೂಪಗಳು ಕಾಲಕ್ರಮದಲ್ಲಿ ಶಿಷ್ಟರೂಪಗಳಾಗುತ್ತವೆಂಬುದನ್ನು ಅವರು ಗಮನಿಸಿದಂತಿಲ್ಲ. ಬರುವಿಕೆ, ಇರುವಿಕೆ ಎಂಬ ಸಾಮ್ಯಭ್ರಮೆಯಿಂದ ಕಲ್ಪನೆ ಮಾಡಿದ ರೂಪಗಳು ತ್ಯಾಜ್ಯವೆಂಬ ಅವರ ಅಭಿಪ್ರಾಯವೂ ಸಾಧುವಲ್ಲ. ಜನರಿಗೆ ಪರಿಚಯವಿಲ್ಲದ ವಂದನೀಯ, ಶೋಚನೀಯ ಎಂಬ ಸಂಸ್ಕೃತ ಶಬ್ದಗಳು ಅಗ್ರಾಹ್ಯವೆನ್ನುತ್ತಾರೆ. ಒಂದು ಕಾಲದಲ್ಲಿ ಅಗ್ರಾಹ್ಯವಾದುವು ಮತ್ತೊಂದು ಕಾಲದಲ್ಲಿ ಸ್ವೀಕಾರಾರ್ಹವಾಗುತ್ತವೆಂಬುದನ್ನು ಮರೆಯುವಂತಿಲ್ಲ. ಸರಿಯಾಗಿ ಹೊಂದುವ, ಬೇಗ ಅರ್ಥವಾಗುವ, ಜನತೆಯಲ್ಲಿ ಬಳಕೆಯಲ್ಲಿರುವ ಪದ ಅನ್ಯದೇಶ್ಯವಾದರೂ ಗ್ರಾಹ್ಯ ಎನ್ನುವ ಅವರ ಅಭಿಪ್ರಾಯ ಎಲ್ಲ ಕಾಲಕ್ಕೂ ಸರಿ. ಪ್ರಾಚೀನ ಸಂಪ್ರದಾಯದ ಕೊಳಚೆಯಲ್ಲಿ ಮುಳುಗಿರುವ ಪಂಡಿತರ ಕಾಲಾಯುನ ಮುಷ್ಟಿಯಿಂದ ಭಾಷೆಯನ್ನು ಪಾರುಮಾಡದ ಹೊರತು, ಬರಹಗಾರರಲ್ಲಿ ವಿದ್ಯಾವಂತರಲ್ಲಿ ಸಾಮಾನ್ಯರಲ್ಲಿ ಮಾತೃಭಾಷಾ ಪ್ರಜ್ಞೆಯನ್ನು ಕೆರಳಿಸದ ಹೊರತು ಭಾಷೆಯ ಅಭಿವೃದ್ಧಿ ಗಗನಕುಸುಮವಾಗುತ್ತದೆಂಬುದನ್ನು ಅವರು ಬಲ್ಲವರಾಗಿದ್ದರು.

ಶ್ರೀಯವರು ಕಟ್ಟುನಿಟ್ಟುಗಳನ್ನು ವಿಧಿಸಿದ್ದು ಮಾತ್ರವಲ್ಲ, ಅವುಗಳನ್ನು ತಮ್ಮ ಕೃತಿಗಳಲ್ಲಿ ಪ್ರಯೋಗಿಸಿ ತೋರಿಸುತ್ತಾರೆ. ವಸ್ತು ರೀತಿ ಭಾವ ವರ್ಣನೆ ಶೈಲಿ ರೂಪ–ಈ ಎಲ್ಲದರಲ್ಲಿಯೂ ಬದಲಾವಣೆ ಅಗತ್ಯ, ಸಾಧ್ಯ ಎಂಬುದನ್ನು ಇಂಗ್ಲಿಷ್ ಭಾವಗೀತೆಗಳ ಭಾಷಾಂತರದ ಮೂಲಕ ಸ್ಪಷ್ಟಪಡಿಸುತ್ತಾರೆ.

ಕಲ್ಬುರ್ಗಿಯಲ್ಲಿ ನಡೆದ ಹದಿನಾಲ್ಕನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಮಾಡಿದ ಭಾಷಣದಲ್ಲಿ 'ಅಗೋ ನೋಡಿ, ಚಲನೆಯಿಲ್ಲದೆ ನಿಂತಿರುವಳು ಕರ್ಣಾಟಕ ಸರಸ್ವತೀದೇವಿ. ತಲೆಯಮೇಲೆ ಭಾರವಾದ ಕಿರೀಟ, ಅಂಗಾಂಗವೆಲ್ಲ ತೆರವಿಲ್ಲದೆ ಮುಳ್ಳುಹುಯ್ದಂತೆ ಹೇರಿರುವ ಜವಾಹಿರಿ. ಶಾಸ್ತ್ರ ನಿಯಮಿತವಾದ ಒಂದು ಬಗೆಯ ನಿಲವಿನ ಭಂಗಿ,....ಬನ್ನಿ ಆಕೆಯನ್ನು ಎಚ್ಚರಿಸೋಣ. ಕಿರೀಟದ, ಜವಾಹಿರಿಯ, ಶಿಲ್ಪನಿಯಮದ ಜರತಾರಿಯ ಭಾರವನ್ನೂ ಬಿಗುಪನ್ನೂ ಬಿಡಿಸೋಣ; ವಿಶ್ವವಾಣಿಯ, ದಿವ್ಯವಾಣಿಯ, ಸಂಜೀವನ ಮಣಿಯ ಸ್ಪರ್ಶದಿಂದ ಶಾಪಗ್ರಸ್ತಳಾದ ಶಿಲಾಮೂರ್ತಿಯನ್ನು ಜೀವವುಳ್ಳ 'ಚೆಲುವೆಯನ್ನಾಗಿ ಮಾಡೋಣ' [10] ಎಂದವರು ಸಾಹಿತ್ಯ ಕಲಾರಾಧಕರ ಮುಂದೆ ವಿನಂತಿಮಾಡಿಕೊಳ್ಳುತ್ತಾರೆ. ಮತ್ತೊಮ್ಮೆ ಕನ್ನಡ ಸಾಹಿತ್ಯದ ಸುವರ್ಣಯುಗ ಬರಬಾರದೆ ಎಂದವರು ಹಂಬಲಿಸುತ್ತ, ಅದಕ್ಕಾಗಿ ರಿನೈಸಾನ್ಸ್ ಆವಶ್ಯಕ ಎನ್ನುತ್ತಾರೆ. 'ಅದು ಬರಿಯ ಪುನರುತ್ಥಾನವಲ್ಲ, ಜೀರ್ಣೋದ್ಧಾರವಲ್ಲ. ಅನುಸರಣವಲ್ಲ, ಅನುಕರಣವಲ್ಲ. ಪುನರುಜ್ಜೀವನ ಏನೋ ಒಂದು ಬಗೆಯ ಧೈರ್ಯ ಕೂಡಿದ ವಿಚಾರ. ಹೊಸ ಹೊಸ ನಿರ್ಮಾಣ, ಮರುಹುಟ್ಟು, ಆಳವಾದ ಸಮನ್ವಯ–ಹೊಸದು ಹಳದು, ನಮ್ಮದು ಹೆರರದು ಎಲ್ಲವನ್ನು ಹೊಂದಿಕೆ ಮಾಡುವುದು.' [11] ನಾಲ್ಕಾರು ಕಡೆಯಿಂದ ಬರುವ ಗಾಳಿಯನ್ನು ಸೇವಿಸುತ್ತ, ಎಲ್ಲ ಕಡೆಗಳಿಂದ ಹರಿದು ಬರುವ ಜೀವ ಶಕ್ತಿಯನ್ನು ಹೀರಿಕೊಳ್ಳುತ್ತ, ತನ್ನತನವನ್ನು ಉಜ್ವಲವಾಗಿ ಬೆಳೆಸಿಕೊಂಡರೇನೇ ಸಾಹಿತ್ಯ ಹೊರವಾಗುತ್ತದೆ, ತೇಜೋನ್ವಿತವಾಗುತ್ತದೆ, ಸಮಾಜವನ್ನು ರಂಜಿಸುವ, ಪೋಷಿಸುವ, ಉತ್ತೇಜಿಸುವ ಶಕ್ತಿಯಾಗುತ್ತದೆ. ಶ್ರೀಯವರು ಕಂಡ ಸುವರ್ಣ ಯುಗದ ಕನಸು ಅವರು ಬದುಕಿದ್ದಾಗ ನನಸಾಗದಿದ್ದರೂ ಅವರು ತೀರಿಕೊಂಡ ತರುಣದಲ್ಲಿಯೇ ಕೈಗೂಡಿದ್ದು ಅವರ ಪ್ರವಾದೀದೃಷ್ಟಿಗೆ ಸಾಕ್ಷಿಯಾಗಿದೆ.

ಶ್ರೀಯವರ ವಯಸ್ಸು ಪಕ್ವವಾದಂತೆಲ್ಲ, ಅವರ ಅನುಭವ ವಿಶಾಲವಾದಂತೆಲ್ಲ, ಅವರ ವೈಚಾರಿಕತೆ ಮಾಗಿದಂತೆಲ್ಲ ನಾಡುನುಡಿಗಳ ಬಗೆಗೆ ಅವರ ಅಭಿಮಾನ ಪರಾಕಾಷ್ಠೆಗೇರುತ್ತದೆ. 'ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ' [12] ಎಂದವರು ಸ್ಪಷ್ಟ

[10] ಶ್ರೀ ಸಾಹಿತ್ಯ, ಪುಟ ೨೭೯

[11] ,, ೨೮೫

[12] ,, ೨೯೦

ಪಡಿಸುತ್ತಾರೆ. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಗೆ ಅಪಾಯ ತಟ್ಟದಂತೆ, ಅದಕ್ಕೆ ಪ್ರಧಾನ ಸ್ಥಾನ ಕೊಟ್ಟುಕೊಂಡು, ಕನ್ನಡ ನಾಡಿನ ಜನರೆಲ್ಲಾ ಅದರ ಪ್ರಯೋಜನ ಪಡೆಯುವಂತೆ ಅವಕಾಶ ಕಲ್ಪಿಸಬೇಕಾದ್ದು ಸಂಬಂಧಪಟ್ಟವರ ಕರ್ತವ್ಯವೆಂದು ಅವರು ಘೋಷಿಸುತ್ತಾರೆ. 'ಭಾಷೆಯೆನ್ನುವುದು ನಿತ್ಯಗಟ್ಟಳೆಯ ವ್ಯಾಪಾರಕ್ಕಾಗಿ ಇರುವುದು ಮಾತ್ರವಲ್ಲ, ಅದರ ಮುಖ್ಯಕಾರ್ಯ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದಕ್ಕೆ ತೆಗೆದುಕೊಂಡು ಹೋಗಲು ಸಾಧಕ ವಾಗುವುದು, ಆನಂದರಸವನ್ನು ಕಲೆಯ ಮೂಲಕ ಹೃದಯಕ್ಕೆ ತುಂಬುವುದು, ಆತ್ಮೋದ್ಧಾರಕ್ಕೆ ಸೋಪಾನವಾಗುವುದು—ಒಂದು ಇಡಿಯ ಜನವನ್ನು ; ಅಲ್ಲೊಬ್ಬರನ್ನು ಇಲ್ಲೊಬ್ಬರನ್ನಲ್ಲ ; ಕೇವಲ ವಿದ್ಯಾಪಾರಂಗತರನ್ನಲ್ಲ, ಜನ ಸಾಮಾನ್ಯವನ್ನು, ನಾಡಿನ ಗಂಡಸರು, ಹೆಂಗಸರು, ಮಕ್ಕಳನ್ನು. ಈ ಕೆಲಸ ಕಷ್ಟಪಟ್ಟು ನಮ್ಮ ಬುದ್ಧಿಶಕ್ತಿಯನ್ನೆಲ್ಲಾ ವೆಚ್ಚಮಾಡಿ ಕಲಿಯುವ ಪರಭಾಷೆ ಯಿಂದ ನೆರವೇರುವುದಿಲ್ಲ. ಯಾವುದು ಸರಾಗವಾಗಿ ನಮ್ಮನ್ನು ಒಲಿದು ಬಂದಿರು ತ್ತದೆಯೋ ಯಾವುದು ನಮ್ಮನ್ನು ಬೆನ್ನಟ್ಟಿ ಬಂದು ರಕ್ತಗತವಾಗಿರುತ್ತದೆಯೋ ಅಂಥ ಭಾಷೆಯಿಂದ ಮಾತ್ರವೇ ಇದು ಸಾಧ್ಯ. ಆ ಭಾಷೆ ದೇಶ ಭಾಷೆ.'[13] ಅಂಥ ದೇಶ ಭಾಷೆಯಾದರೂ ಹೇಗಿರಬೇಕು? ಅದು ತಿಳಿಗನ್ನಡವಾಗಿ, ತಿರುಳ್ಗನ್ನಡವಾಗಿ ಮೆರೆಯಬೇಕು. ಹಾಗೆ ಮೆರೆದಾಗ ಶ್ರೀಸಾಮಾನ್ಯನ ಆತ್ಮ ಶಕ್ತಿಯ ಹೊರಹೊಮ್ಮುಗೆಗೂ ದಾರಿಯಾಗುತ್ತದೆ. 'ಆಗ್ಗೆ ಕನ್ನಡಿಗರು ಇನ್ನೂ ತೇಜಸ್ವಿಗಳಾಗುವರು ; ಹಿಂದುಳಿದಿರುವ ಜನಸಾಮಾನ್ಯರ ಮುಸುಕು ಮುಚ್ಚಿರುವ ಜ್ಞಾನವನ್ನು ಆತ್ಮಶಕ್ತಿಯನ್ನು ಬಿಡುಗಡೆಮಾಡಿದರೆ, ಎಷ್ಟು ಸಾಹಿತ್ಯ ಸಂಪತ್ತು ಹೊರಕ್ಕೆ ಹೊಮ್ಮುವುದೋ ನಾವು ಬಲ್ಲೆವೆ' ?[14] ಎಂಬ ಅವರ ಸವಾಲಿಗೆ ವಚನ ಯುಗವೆ ಸಾಕ್ಷಿಯಾಗಿದೆ. ಆದ್ದರಿಂದಲೇ ಅವರು ಸಾರುತ್ತಾರೆ. 'ಕನ್ನಡ ನಾಡಿನ ಮಕ್ಕಳು ಕನ್ನಡದಿಂದ ಬೆಳೆಯಲಿ ! ಕನ್ನಡ ನಾಡು ಕನ್ನಡದಿಂದ ಕೂಡಲಿ ! ಕನ್ನಡ ಬಾಳಲಿ, ಗೆಲ್ಲಲಿ !' ಎಂದು. 'ಕನ್ನಡಮಾತೆ ಉದ್ಧಾರವಾದರೆ ಭಾರತಮಾತೆಯೂ ವೃದ್ಧಿಯಾಗುತ್ತಾಳೆ'[15] ಎಂಬ ಅವರ ಸಾರೋಕ್ತಿ ನಮ್ಮ ನಾಡಿನ ರಾಜಕಾರಣಿಗಳಿಗೆ ಅರ್ಥವಾಗ ದಿರುವುದು ದುರ್ದೈವ. ಕನ್ನಡ ಮಾತೆಯ ಮೂಲಕ ಭಾರತಮಾತೆಯನ್ನು

---

[13] ಶ್ರೀ ಸಾಹಿತ್ಯ, ಪುಟ ೨೯೧

[14] ,, ೨೭೭

[15] ,, ೨೯೭

ಪಂಪನ ಬನವಾಸಿ ಕನ್ನಡಿಗರ ತೀರ್ಥಕ್ಷೇತ್ರ. ಅದು ಅಂದಿನಂತೆಯೇ ಇಂದೂ ಇದೆ. ಆದರ ಚೆಲುವು ಒಂದಿನಿತೂ ಮಾಸಿಲ್ಲ.

> ಚೆಲ್ವಿನ ಬಳೆ, ಕಣ್ಣ ಳ ಬಳೆ, ಸುಖದೊಱತೆಯ ಬನವಾಸೀ,
> ಬಳೆದಲೆದಾ ಕಾನ್ಪುಲೆಗಳನ್ ಆನ್ ಮಱತಪೆನೆ, ಬನವಾಸೀ !
> ಪೆರ್ಮೆಯ ನೆಲೆ, ಪಡುಗಡಲಲೆ ಸುಖ ಮೆಲಚುಪ ಬನವಾಸೀ

ಈ ನುಡಿಗಳನೋದಿದಾಗ ಪಂಪನೇ ಶ್ರೀಯವರ ಹೃದಯದಲ್ಲವಿತಿದ್ದು ಆದನ್ನು ಮಾಟಿದಂತೆ ಭಾಸವಾಗುತ್ತದೆ. ಅಶ್ವತ್ಥಾಮನ ಕೊನೆಯ ನುಡಿಗಳಲ್ಲಿ ಶ್ರೀಯವರ ಹೃದಯ ಕರಗಿ ಭಾವಗಂಗೆಯಾಗಿ ಹರಿದಿದೆ:

> ಇದುವೆ ಕಡೆ, ಕಡೆಯ ನುಡಿ ನುಡಿವೆನ್.
> ಓ ಬೆಳಕೆ, ಓ ಪುಣ್ಯಭೂಮಿಯೇ, ಕನ್ನಡವೆ, ಎನ್ನ ತಾಯ್ನಾಡೆ,
> ನೆಲನ್ ಅಱತವ ಬನವಾಸಿ, ತೆಂಗುಗಱ ಕೊಡೆಯಿರ್ಪ ಕಡಲುರಿಯ ಮನೆಯೇ,
> ಒಡನಾಡಿ ಪಸುಳೆಗಳೆ, ಕೆಱತಗಳ್, ಪೊಸಲ ಳೇ, ಓ ಪಸುರ ಬಯಲೇ
> ಬೀಱ್ಕೊಡಿಂ, ಚೀಱ್ಕೊಡಿಂ, ಎನಗೆ ಜೀವಾಸಂಪದಮ್ ಆಗಿರ್ದರ್ ಎಲ್ಲರ್
> ಬೀಱ್ಕೊಡಿಂ, ಪೋಗಿ ಬರ್ಪೆನ್.

ಅದೇನು ಪ್ರೇಮ, ಅದೇನು ಹೆಮ್ಮೆ, ಅದೇನು ಉಕ್ಕು, ಅದೇನು ಹಿಗ್ಗು ! ಬಹು ಮೊದಲೇ ಶ್ರೀಯವರು ತಮ್ಮ ಚರಮಗೀತೆಯನ್ನು ತಾವೇ ಹಾಡಿ ಕೊಂಡಂತಿದೆ. ಇಲ್ಲಿ ಉಕ್ಕುತ್ತಿರುವ ಕನ್ನಡತನ ಕನ್ನಡಿಗರ ಮನೆ ಮನೆಗಳ ಮುಂದೆ ಹರಿದು, ಅವರ ಮನ ಮನೆಗಳನ್ನು ಮೀಯಿಸುವಂತಿದೆ.

ಕನ್ನಡ ಜನ ನುಡಿ ನಾಡು ಪರಸ್ಪರ ಪ್ರತ್ಯೇಕವಲ್ಲ. ನುಡಿ ಇದ್ದರೆ ಜನ, ಜನರಿದ್ದರೆ ನಾಡು. ಈ ನುಡಿ ನೆನ್ನೆ ಮೊನ್ನೆಯದಲ್ಲ; ಹರಪ್ಪ ಮೊಹೆಂಜೊದಾರೊ ಕಾಲದಲ್ಲಿ ಇದ್ದದ್ದು. ನುಡಿಯಂತೆ ನಾಡೂ ಪ್ರಾಚೀನ ವಾಗಿರಬೇಕಲ್ಲವೆ? 'ಕನ್ನಡ ಮೊದಲೊ ತಮಿಳು ಮೊದಲೊ' ಎನ್ನುವ ತಮ್ಮೊಂದು ಲೇಖನದಲ್ಲಿ ಶ್ರೀಯವರು ಕನ್ನಡವೇ ತಮಿಳಿಗಿಂತ ಮೊದಲು ಪೂರ್ವದ್ರಾವಿಡದಿಂದ ಸಿಡಿದಿರಬೇಕೆಂದು ಊಹಿಸುತ್ತಾರೆ. 'ಕನ್ನಡದ ನುಡಿಗಳೂ ವ್ಯಾಕರಣದ ಸಿರಿಗಳೂ ಭಾಷಾಶಾಸ್ತ್ರ ದೃಷ್ಟಿಯಿಂದ ಕನ್ನಡದಲ್ಲೇ ಪೂರ್ವರೂಪಗಳಾಗಿಯೂ ತಮಿಳಿನವವು ಅನಂತರದ ರೂಪಗಳಾಗಿಯೂ ಸ್ಪಷ್ಟ ವಾಗಿ ಕಾಣುತ್ತವೆ. ಈ ಕುರುಹುಗಳು, ಉಳಿಕೆಗಳು ಕನ್ನಡ ತಮಿಳಿನಿಂದ ಹುಟ್ಟಿಲ್ಲ. ಕನ್ನಡವೇ ಮೊದಲೆಂದು ತೋರಿಸುತ್ತವೆ.'[19] ಭಾಷಾ ವಿಜ್ಞಾನಿಗಳು

---

[19] ಶ್ರೀ ಸಾಹಿತ್ಯ, ಪುಟ ೩೨೩

ಈ ನಿಟ್ಟಿನಲ್ಲಿ ಸಂಶೋಧನೆ ಮುಂದುವರಿಸಿ, ಅದರ ಯಥಾರ್ಥತೆಯನ್ನು ಸ್ಥಿರ ಪಡಿಸಬೇಕಾಗಿದೆ. ತಮಿಳಿನ 'ಪುಜನಾನೂಜು'ನಲ್ಲಿ ಪೊಯ್ಸಳರ ಉಲ್ಲೇಖ ವನ್ನವರು ಗುರುತಿಸಿದ್ದಾರೆ.[20] ಇದು ನಿಜವಾದರೆ ಹೊಯ್ಸಳ ವಂಶದ ಇತಿಹಾಸ ಇನ್ನೂ ಹಿಂದಕ್ಕೆ ಹೋಗುತ್ತದೆ; ಇಲ್ಲವೆ ಪುಜನಾನೂಜಿನ ಕಾಲ ಬದಲಾವಣೆ ಯಾಗುತ್ತದೆ. ಕನ್ನಡದ ಬಗೆಗಿನ ಅವರ ಕಕ್ಕುಲಿತೆ ಅದರ ಪ್ರಾಚೀನತೆಯನ್ನು ಕುರಿತ ಈ ಎರಡು ಸಂಶೋಧನ ಲೇಖನಗಳಲ್ಲಿ ಪಡಿಮೂಡಿದೆ.

ದಿನ ಕಳೆದಂತೆಲ್ಲ ಕನ್ನಡದ ಏಳ್ಗೆಯೊಂದೆ ಅವರ ಸರ್ವಸಾಹಸದ, ಅವರ ಆರಾಧನೆಯ, ಅವರ ಕಾಯಕದ, ಅವರ ಸರ್ವೇಂದ್ರಿಯ ವ್ಯಾಪಾರಗಳ ಏಕೈಕ ಗುರಿಯಾಗುತ್ತದೆ. ಕನ್ನಡ ವಿದ್ವತ್ತಿಗೆ ಬುನಾದಿಯಾಗಿ ಕನ್ನಡ ಸಾಹಿತ್ಯಚರಿತ್ರೆ ಮತ್ತು ಕನ್ನಡ ಛಂದಸ್ಸಿನ ಚರಿತ್ರೆಯನ್ನು ತಾವೇ ಬರೆಯುತ್ತಾರೆ. ನೃಪತುಂಗ, ಪಂಪ, ರನ್ನ, ಲಕ್ಷ್ಮೀಶ, ನಾಗಚಂದ್ರ, ಶರಣಪ್ಪ, ಹೊನ್ನಮ್ಮ ಮೊದಲಾದ ಕವಿಕವಯತ್ರಿಯರ ಕಾವ್ಯಗಳನ್ನು ವಿಮರ್ಶಿಸುವಲ್ಲಿ, ಶ್ರೀಕೃಷ್ಣರಾಜರ ರಜತೋತ್ಸವ ಪ್ರಗಾಥ ರಚಿಸುವಲ್ಲಿ ಅವರು ಕನ್ನಡಕ್ಕೆ ಕೀರ್ತಿ ತಂದ ಮಹಾ ಮಹಿಮರೆಂದು ಕೊಂಡಾಡುತ್ತಾರೆ; ಅದೇ ಸಂದರ್ಭದಲ್ಲಿ ನಾಡು ನುಡಿಗಳ ಮೇಲ್ಮೆಯನ್ನು ಮನವುಬ್ಬಿ ಪ್ರಶಂಸಿಸುತ್ತಾರೆ. 'ಇಂತಹವರಿಗೆ ನಾರಣಪ್ಪ ಮಹಾತ್ಮ, ವಿಶ್ವಾತ್ಮ, ಏಕಮೆವಾದ್ವಿತೀಯ. ಹತ್ತಿರ, ತೀರ ಹತ್ತಿರ ನುಡಿ: ಇಂಪು–ಏನಿಂಪು!-ಹಾಡು; ಆಳ–ಅಗಲ, ಅಗಲ–ಆಳ, ನೋಟ, ಅನುಭವ ರಸಾಯನ, ಅಂಜನ, ಏನಚ್ಚರಿ ಈತ ಲೋಕಪ್ರಿಯನಾದದ್ದು, ಎಲ್ಲರ ಹೃದಯ ವನ್ನು ಸೂರೆಗೊಂಡದ್ದು.[21] ನಾರಣಪ್ಪನ ಈ ಸ್ತುತಿಯಲ್ಲಿ ಕನ್ನಡದ ನುಡಿಯೂ ರುಚಿಯೂ ಸಮಾವೇಶಗೊಂಡಿವೆ. ಮಾಸ್ತಿ ಕುವೆಂಪು ಶಾಮರಾಯ ವಿಸೀ ದೇಶಪಾಂಡೆಯವರನ್ನು ಕುರಿತು ಬರೆಯುವಾಗಲೂ ಕನ್ನಡ ತಾಯಿಯ ಚಿತ್ರ ಅವರ ಕಣ್ಮುಂದೆ ನಿಲ್ಲುತ್ತದೆ. ಕಿರಿಯ ಲೇಖಕರ ಬಗ್ಗೆ ಒಳ್ಳೆಯ ಮಾತಾಡಿ, ಅವರ ಬೆನ್ನು ತಟ್ಟುವಲ್ಲಿಯೂ ಶ್ರೀಯವರ ಔದಾರ್ಯ ಹಾಗೂ ಕನ್ನಡ ಪ್ರೇಮ ಹೊರಸೂಸುತ್ತವೆ. ನಾಡು ನುಡಿಗಳ ಮಹಿಮೆ ಗರಿಮೆಗಳು ಕನ್ನಡಿಗರ ಹೃದಯ ದಲ್ಲಿ ನಾಟಲೆಂದು 'ಕನ್ನಡ ಬಾವುಟ'ವನ್ನು ಪ್ರಕಟಿಸುತ್ತಾರೆ; ಹಳಗನ್ನಡದ ಸೊಗಸು ಸಹೃದಯದ ಹೃದಯಗಳಿಗಿಳಿಯಲೆಂದು ಸಂಗ್ರಹ ಗ್ರಂಥಗಳ

[20] ಶ್ರೀ ಸಾಹಿತ್ಯ, ಪುಟ ೩೯೭

[21] ,, ೩೯೦

ಪ್ರಕಟನೆಗೆ ನೆರವಾಗುತ್ತಾರೆ. ಜನಪದ ಸಾಹಿತ್ಯದಲ್ಲಿ ಮಣ್ಣಿನ ಕಂಪನ್ನು ಸವಿದು ಹಿಗ್ಗುತ್ತಾರೆ. ಲಿಪಿ ಸಂಸ್ಕರಣ ಕಾರ್ಯವಾಗಲಿ, ಅಕ್ಷರ ಪ್ರಚಾರ ಸಮಿತಿಯ ಅಧ್ಯಕ್ಷಸ್ಥಾನವಾಗಲಿ, ಅರಮನೆ ಗುರುಮನೆಗಳನ್ನು ಆಶ್ರಯಿಸಿದ್ದಾಗಲಿ, ಎಲ್ಲವೂ ಕನ್ನಡದ ಉತ್ಥಾನಕ್ಕಾಗಿ, ಅದರ ಸಿಂಹಾಸನಾರೋಹಣಕ್ಕಾಗಿ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಚ್ಚುಕೂಟದ ಸ್ಥಾಪನೆಯಾಗಲಿ, ಸಾಹಿತ್ಯ ಪರೀಕ್ಷೆಗಳ ಏರ್ಪಾಡಾಗಲಿ, ವಸಂತ ಸಾಹಿತ್ಯೋತ್ಸವದ ವ್ಯವಸ್ಥೆಯಾಗಲಿ, ಕನ್ನಡ ನುಡಿಯ ಪ್ರಕಟನೆಯಾಗಲಿ, ಎಲ್ಲವೂ ಕನ್ನಡದ ಸಂಘಟನೆಗಾಗಿ ಮೀಸಲು.

ಈಗಿನಂತೆ ಯಾವ ಸೌಕರ್ಯವಿಲ್ಲದ ಆಕಾಲದಲ್ಲಿ ಚಳಿ ಮಳೆಯೆನ್ನದೆ, ಗಾಳಿ ಬಿಸಿಲೆನ್ನದೆ, ಬಯಲು ಮಲೆ ಕಣಿವೆ ಸೀಮೆಗಳೆನ್ನದೆ, ಕೊಳ್ಳಕೊಂಪೆಗಳೆನ್ನದೆ, ದೇಹಾಯಾಸ ಮನಃಕ್ಲೇಶಗಳನ್ನು ಮರೆತು ಕನ್ನಡನಾಡನ್ನು ಸುತ್ತುತ್ತಾರೆ. ತಮ್ಮ ಸುತ್ತಾಟದ ಅನುಭವವನ್ನು, ತಾವು ಕಂಡ ದೃಶ್ಯಗಳನ್ನು ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷದ ಹಬ್ಬದ ಸಮಯದಲ್ಲಿ ಬರೆದು ಓದಿದ 'ಕನ್ನಡ ತಾಯ ನೋಟ'ವೆಂಬ ಕವಿತೆಯಲ್ಲಿ ಓದಿದವರು ಕೇಳಿದವರು ಕಣ್ಣೀರಿಡುವಂತೆ ಚಿತ್ರಿಸಿದ್ದಾರೆ.

ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ
ತಾಯಡಿಯ ಹುಡಿಯ ತಲೆಗಾಂತು, ಹರಕೆಯ ಪವಿತ್ರಯಾತ್ರೆಯಲಿ.
ಏನು ಚೆಲುವಿನ ನಾಡು ! ಚೆಲುವು ಚೆಲ್ಲುವ ನಾಡು ! ಕನ್ನಡನಾಡು !
ಏನು ಚಿನ್ನದ ನಾಡು ! ನಮ್ಮೊಲುಮೆಯಾ ನಾಡು ! ನಮ್ಮಿನಿಯ ನಾಡು !

ಓದು ಮುಂದೆ ಮುಂದೆ ಸಾಗಿದಂತೆಲ್ಲ ಕನ್ನಡ ನಾಡಿನ ಸುಂದರ ದೃಶ್ಯ ಸುರುಳಿ ಬಿಚ್ಚಿ ಕಣ್ಮುಂದೆ ಹಾಯ್ದು ಹೋಗುವಂತೆ, ಪೂರ್ವದ ವೀರಾಧಿವೀರರು ಸಾಲು ಸಾಲಾಗಿ ಮೆರವಣಿಗೆ ಹೊರಟಂತೆ ಭಾಸವಾಗುತ್ತದೆ. ಎಲ್ಲ ದಿಕ್ಕುಗಳಲ್ಲಿ ಸಂಚರಿಸಿ, ಹಂಪೆಗೆ ಬಂದ ಯಾತ್ರಿಕ ಮುಳ್ಳಿಡಿದ ಕೊರಕಲ ಬಳಿ ಚದರಿರುವ ಮೊರಡಿಗಳ ನಡುವೆ, ಕಲ್ಲು ಹೂವಿಡಿದರೆಯ ಮೇಲೆ ಸೊರಗಿ ಕೈಮೇಲೆ ತಲೆಯೂರಿ ಕುಳಿತ ಬಡವಾದ ತಾಯಿಯೊಬ್ಬಳನ್ನು ಕಾಣುತ್ತಾನೆ. 'ಯಾರವ್ವ ನೀ ತಾಯಿ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ?' ಎಂಬ ಅವನ ಪ್ರಶ್ನೆಗೆ ತಾಯಿ ಕಲ್ಲೂ ಕರಗುವಂತೆ ಉತ್ತರ ನೀಡುತ್ತಾಳೆ.

ಏನು ಕವಿಯಿತೊ ಮಂಕು, ಮಕ್ಕಳಿಗೆ! ಯಾರೆರಚಿದರೊ ಬೂದಿ, ಕಾಣೆ.
ನನ್ನನೊಲ್ಲರು ನನ್ನ ಮಕ್ಕಳೇ! ತಾವ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ—ಹೆರರ ಕೂಗೇ ಕೂಗು, ಹೆರರದೇ ಹೆಮ್ಮೆ!

ನನ್ನ ಮನೆ ಹಾಳು !
ನನ್ನ ನುಡಿ ಬೀಳು.

ಎಂದು ಮುಂತಾಗಿ ಅವಳು ಒರಲುತ್ತಾಳೆ. ಹೆರರ ಕೈ ಕಾಯುತ್ತ, ಸಾಯದೆಯೆ ಬದುಕದೆಯೆ ಬಾಳನೂಕುವೆನು' ಎಂದು ಗದ್ಗದಿಸುತ್ತಾಳೆ. ಆ ಯಾತ್ರಿಕ ಎಲ್ಲ ಮಕ್ಕಳ ಪರವಾಗಿ 'ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ ಮನೆ ಮಕ್ಕಳೆಲ್ಲ ಪೇರೊಕ್ಕಲಾಗಿ ಪಾಡುವರು !' ಎಂದು ಆಶ್ವಾಸನೆ ನೀಡುತ್ತಾನೆ. ಆ ತಾಯಿ ಭುವನೇಶ್ವರಿದೇವಿ ನಕ್ಕು ರಥವೇರುತ್ತಾಳೆ; ಎಲ್ಲ ಮಕ್ಕಳು ಒಕ್ಕೊರಲಿನಿಂದ ಜಯಕಾರ ಮಾಡುತ್ತಾರೆ, ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ–ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ' ಎಂದು. ಈ ಕವಿತೆಯನ್ನೋದಿದಾಗ ಕನ್ನಡನಾಡಿನ ಭವ್ಯ ಇತಿಹಾಸ ಅದರ ಏರುಬೀಳುಗಳು ಕಣ್ಣಿಗೆ ಕಟ್ಟಿದಂತಾಗುತ್ತದೆ.

ಆ ಯಾತ್ರಿಕನೆ ಕನ್ನಡದ ಕಣ್ವರು, ಕನ್ನಡದ ದಾಸರು. ಕನ್ನಡದ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು. ಮುಂದಕ್ಕೆ ಹೋಗಿ ಬಾ ಎನ್ನದೆ ನೀವು ಭಿಕ್ಷೆಯನ್ನು ಇಕ್ಕುತ್ತಿದ್ದೀರಿ. ನಿಮ್ಮ ಕಾಣಿಕೆಗೆ ಪ್ರತಿಯಾಗಿ ನನ್ನನ್ನೇ ಕಾಣಿಕೆಯಾಗಿ ಒಪ್ಪಿಸಿಕೊಳ್ಳುತ್ತೇನೆ' ಎಂದು ನುಡಿದರು ಶ್ರೀಯವರು. 'ಕನ್ನಡ ನುಡಿ, ಕನ್ನಡ ನಯ, ಕನ್ನಡ ಜನ, ಒಂದಾಗಬೇಕಾಗಿದೆ; ಮುಂದಾಗಬೇಕಾಗಿದೆ. ಕನ್ನಡ ನಾಡು ಕೂಡಬೇಕಾಗಿದೆ. ಕನ್ನಡ ತಾಯಿ ಕರೆಯುತ್ತಿದ್ದಾಳೆ. ಕನ್ನಡಿಗರಾ, ಓಡಿಬನ್ನಿ, ಕೂಡಿಬನ್ನಿ ನೆರವಾಗಿ....ಯಾವ ಕಾರಣದಿಂದಲಾದರೂ ನಾನು ಯಾರಿಗಾದರೂ ಬೇಡದವನಾಗಿದ್ದರೆ, ನಮ್ಮ ತಾಯ ಭಕ್ತಿಯಲ್ಲಿ ಅದನ್ನು ಮರೆತು, ನನ್ನೊಡನೆ ಕೈಂಕರ್ಯಕ್ಕೆ ನಿಲ್ಲಬೇಕೆಂದು ಬೇಡಿಕೊಳ್ಳುತ್ತೇನೆ' [22] ಎಂಬ ಅವರ ಬಿನ್ನಹದಲ್ಲಿ ಮೊರೆಯಿದೆ, ದೈನ್ಯವಿದೆ, ಅಳಲಿದೆ, ಕಾಳಜಿಯಿದೆ 'ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು. ಕನ್ನಡದ ಕಾವಲು ನಾಯಿ ನಾನು. ಅದಕ್ಕೆ ಕಾವು ತಟ್ಟುವುದಾದರೆ ನಾನು ಬಗುಳುವುದುಂಟು; ಕಚ್ಚುವ ನಾಯಲ್ಲ. ಕೆಲವರು ನನ್ನನ್ನು ಸಂಸ್ಕೃತ ದ್ವೇಷಿಯೆಂದೂ ಬಿರುದು ಕೊಟ್ಟಿರುತ್ತಾರೆ....ಈ ಮಾತುಗಳಿಂದ ನನಗೆ ಅಸಮಾಧಾನವಿಲ್ಲ' [23] ಎಂದು ಹೇಳುವಾಗ ಅವರು ಆಂಗ್ಲ ಭಾಷೆಯನ್ನು ಸಹ ಮರೆಯುತ್ತಾರೆ. ಎಂಥ ಅಸಪ್ರಚಾರಕ್ಕಾದರೂ ತಲೆಯೊಡ್ಡಲು ಸಿದ್ಧರಾಗಿದ್ದಾರೆ.

---

22-23 ಶ್ರೀ ಸಾಹಿತ್ಯ, ಪುಟ ೨೯೮

ಕನ್ನಡದ ಕಾವಲುನಾಯಿ ಎಂದು ಕರೆದುಕೊಳ್ಳಲೂ ತಯಾರಾಗಿದ್ದಾರೆ. ಅವರ ಈ ಮಾತಿನಲ್ಲಿ ಮಹೇಶ್ವರ ನಿಷ್ಠೆಯಿದೆ, ಹುಸಿಯಿಲ್ಲದ ಶ್ರದ್ಧೆಯಿದೆ. ಕನ್ನಡದ ಕೈಂಕರ್ಯಕ್ಕಾಗಿ ಎಂಥ ಅವಮಾನವನ್ನು ಸಹಿಸಲೂ ಅವರು ಹಿಂಜರಿಯು ವುದಿಲ್ಲ. 'ಕನ್ನಡ ತಾಯ ಹಾವುಗೆಯನ್ನು ಹೊತ್ತ ಮೇಲೆ, ನಾನು ಎಲ್ಲವನ್ನು ಕೇಳಲೇಬೇಕು'[24] 'ಡಿಳ್ಳಿ ನನಗೆ ಬಲು ದೂರ, ಕನ್ನಡ ನಾಡಿನ ಹಳ್ಳಿ ನನಗೆ ಸಾಕು. ಅದೇ ನನ್ನ ದೀಕ್ಷೆ, ನನ್ನ ವ್ರತ, ನನ್ನ ನೋಂಪಿ'[25] ಎಂದು ಕೃತ ಸಂಕಲ್ಪರಾದ ಅವರು ಕನ್ನಡನಾಡಿನಲ್ಲಿದ್ದುಕೊಂಡೇ ಕನ್ನಡದ ಮೂಲಕ ಮುಕ್ತಿ ಗಳಿಸಲು ಬಯಸಿದವರು, ಶ್ರಮಿಸಿದವರು. ಅವರು ಮನಸ್ಸು ಮಾಡಿದ್ದರೆ ಆಂಗ್ಲ ಭಾಷೆಯಲ್ಲಿ ಕೃತಿಗಳನ್ನು ರಚಿಸಿ ವಿಶ್ವವಿಖ್ಯಾತ ರಾಗಿ ದೇಶವಿದೇಶಗಳ ಉದ್ದಗಲಕ್ಕೂ ಓಡಾಡಬಹುದಿತ್ತು. ಅವರ ಇಂಗ್ಲಿಷ್ ಪಾಂಡಿತ್ಯವನ್ನು, ಅವರ ಬೋಧನ ಕಲೆಯ ಪರಿಣತಿಯನ್ನು ರೋಲೋ ಮೊದಲಾದ ಆಂಗ್ಲ ವಿದ್ವಾಂಸರೇ ಮೆಚ್ಚಿಕೊಂಡಿದ್ದರೆಂಬ ಸಂಗತಿ ಈ ಸಂದರ್ಭ ದಲ್ಲಿ ನೆನೆಯಬೇಕಾದ್ದು. ಆದರೆ ಕನ್ನಡ ನಾಡಿನಲ್ಲಿ ಹುಟ್ಟಿ, ಇಲ್ಲಿಯ ನೆಲ ಜಲ ಗಳ ಸುಖವನ್ನುಂಡ ಬಳಿಕ, ನಾಡು ನುಡಿಗಳ ಋಣವನ್ನು ತೀರಿಸಬೇಕೆಂಬ ಕೃತಜ್ಞತಾಭಾವ ಅವರ ಕನ್ನಡದ ಹುಚ್ಚಾಗಿ ಪರಿಣಮಿಸುತ್ತದೆ. ಯಾವ ವಿದ್ಯೆ ಯಾದರೂ ಸರಿ ಯಾವ ಬೆಳಕಾದರೂ ಸರಿ, ಅದನ್ನು ಕನ್ನಡದಲ್ಲಿ ತುಂಬಿ ಅದನ್ನು ಒಳ್ಳೆಯ ಭಾಷೆಯನ್ನಾಗಿ ಮಾಡಿ ಒಟ್ಟಿಗೆ ಬಾಳಬೇಕು ಎಂಬ ಹಿರಿಯಾಸೆ, ಹುಚ್ಚು ಅವರದು. ಅದು ಕನ್ನಡ ತಾಯಿಯ ಹಿರಿಯಾಸೆ, ಕನ್ನಡ ನಾಡಿನ ಹೊಂಗನಸು; ಆ ಆಸೆ ಆ ಕನಸು ಅವರು ತೀರಿಕೊಂಡ ಮೇಲಾದರೂ ಕೈಗೂಡಿ, ಅವರ ಆತ್ಮಕ್ಕೆ ಶಾಂತಿ ದೊರೆಯುವಂತಾಗಿದೆ.

ಕನ್ನಡದ ಚಳುವಳಿ ಒಂದಲ್ಲ ಒಂದು ರೂಪದಲ್ಲಿ, ವಿವಿಧ ಕಾರಣಗಳಿಗಾಗಿ ಎಂದೂ ಇದ್ದದ್ದೇ. ನೃಪತುಂಗನೇ ಕನ್ನಡ ಚಳುವಳಿಯ ಆದ್ಯಪ್ರವರ್ತಕ. ಹವಣು ಮೀರಿ ಅನ್ಯಭಾಷೆಯ ಶಬ್ದಗಳನ್ನು ಕನ್ನಡದೊಳಗೆ ಬೆರಸಬಾರದೆಂದು ಅನ್ಯಭಾಷೆಯ ಆಕ್ರಮಣಕ್ಕೆ ಬಲಿಯಾಗಬಾರದೆಂದು ಹೇಳುವಲ್ಲಿ, ಕನ್ನಡ ನಾಡಿನ ಗಡಿ ಗೆರೆಗಳನ್ನು ಗುರುತಿಸುವಲ್ಲಿ ಕನ್ನಡದ ಚಳುವಳಿ ಸುಪ್ತ ಜ್ವಾಲಾ ಮುಖಿಯಂತೆ ಆ ದೊರೆಯ ಕಾಲಕ್ಕಾಗಲೇ ಪ್ರಾರಂಭವಾಗಿತ್ತೆಂದು ಹೇಳ

---

24 ಶ್ರೀ ಸಾಹಿತ್ಯ, ಪುಟ ೩೧೨

25 ,, ,, ೩೧೩

ಬೇಕು. ಮುಂದೆ ಬಸವೇಶ್ವರ ನಯಸೇನ ಆಂಡಯ್ಯ ಮೊದಲಾದ ಕವಿಗಳು ಆ ಆಂದೋಳನದ ಜ್ಯೋತಿ ನಂದದಂತೆ ನೋಡಿಕೊಂಡಿದ್ದಾರೆ. ಗಂಗ ಚಾಲುಕ್ಯ ರಾಷ್ಟ್ರಕೂಟ ಹೊಯ್ಸಳ ವಿಜಯನಗರಗಳ ಅರಸರು ಕರ್ನಾಟಕದ ಗಡಿಯನ್ನು ರಕ್ಷಿಸಲು ಸಕಲ ತ್ಯಾಗಗಳಿಗೂ ಸಜ್ಜುಗೊಂಡದ್ದುಂಟು. ವಿದೇಶೀ ಆಕ್ರಮಣ ಕಾರರ ದುರ್ಬುದ್ಧಿಯಿಂದಾಗಿ ನಾಡು ನುಡಿಗಳೆರಡಕ್ಕೂ ಕುತ್ತೊದಗುತ್ತದೆ. ಇಪ್ಪತ್ತನೆಯ ಶತಮಾನದ ಸ್ವಾತಂತ್ರ್ಯಂದೋಳನ ಅವುಗಳ ರಕ್ಷಣೆಗೆ ಬೆಂಬಲ ನೀಡುತ್ತದೆ. ನಾಡಿನ ಒಗ್ಗಟ್ಟಿಗಾಗಿ, ನುಡಿಯ ರಕ್ಷಣೆಗಾಗಿ ಆಂದೋಲನ ಅನಿವಾರ್ಯವಾಗುತ್ತದೆ. ಆ ಆಂದೋಲನದ ಮುಂಚೂಣಿಯಲ್ಲಿ ನಿಂತು, ಅದರ ಕರ್ಣಧಾರತ್ವವನ್ನು ವಹಿಸುವ ಹೊಣೆಗಾರಿಕೆ ಶ್ರೀಯುವರ ಭುಜಗಳನ್ನೇರು ತ್ತದೆ. ಅದನ್ನು ಸವಾಲಾಗಿ ಸಂತೋಷದಿಂದ ಸ್ವೀಕರಿಸುತ್ತಾರೆ. 'ಕನ್ನಡನಾಡು ಒಡೆದುಹೋಗಿದೆ. ಇದನ್ನು ಹೇಗಾದರೂ ಒಂದುಗೂಡಿಸಬೇಕು, ಎಲ್ಲ ವ್ಯವಹಾರಗಳಲ್ಲಿಯೂ ಕನ್ನಡವನ್ನು ಬಳಸಬೇಕು....ಬ್ರಿಟಿಷ್ ಕರ್ನಾಟಕವೆಲ್ಲ ಒಂದಾದರೆ ಸಾಕು, ಸಂಸ್ಥಾನಗಳು ಹಾಗೆಯೇ ಇರಲಿ—ಎಂಬುದು ಒಂದು ಪಕ್ಷ ದವರ ವಾದ. ಅವರಿಗೆ ನಾನು ಹೇಳುತ್ತೇನೆ: ನಾನು ಹುಚ್ಚು ಕನಸಿನವ ಎಂದೆನ್ನಬೇಡಿ. ಎಲ್ಲ ಒಂದಾಗಬೇಕು. ಇದಕ್ಕೇನೂ ರಕ್ತಪಾತ ಬೇಕಿಲ್ಲ.' ಎಂದು ದ್ವಿಕರ್ನಾಟಕವಾದಿಗಳ ಬಾಯಿಗೆ ಬೀಗ ಹಾಕುತ್ತಾರೆ ಅವರು.

೧೯೪೦ರ ಜನವರಿಯ ಮಿಥಿಕ್ ಸೊಸೈಟಿ ಜರ್ನಲ್‌ನಲ್ಲಿ ಪ್ರಕಟವಾದ ತಮ್ಮ ಲೇಖನದಲ್ಲಿ ಅವರು ಏಕೀಕರಣ ಅನಿವಾರ್ಯವೆಂಬುದನ್ನೂ ಅದರಿಂದೊದ ಗುವ ಲಾಭಗಳನ್ನೂ ಆತ್ಮಪ್ರತ್ಯಯದಿಂದ ವಿವರಿಸುತ್ತಾರೆ: ಕನ್ನಡ ಭಾಷಾ ಸಂಸ್ಕೃತಿಗಳ ಹಾಗು ಕರ್ನಾಟಕದ ಏಕೀಕರಣಕ್ಕೆ ಈಗ ಕಾಲ ಪಕ್ವವಾಗು ತ್ತಿದೆ. ಸಾಹಿತ್ಯಕ ಹಾಗೂ ರಾಜಕೀಯ ಚಳುವಳಿಗಳು ಪರಸ್ಪರವಾಗಿ ಪ್ರಭಾವ ಬೀರುತ್ತವೆ. ಎರಡು ಸಾವಿರ ವರ್ಷಗಳ ಭ್ರಾತೃಜೀವನ ಮತ್ತು ಸಂಸ್ಕೃತಿಗಳ ನೆನಪು, ಅರಮನೆ ಗುರುಮನೆಗಳ ವೈಭವ, ಭೌತಿಕ ಮತ್ತು ಆಧ್ಯಾತ್ಮಿಕ ಸಂಪತ್ತಿನ ಪಿತ್ರಾರ್ಜಿತ ಆಸ್ತಿ. ನಾನಾ ಜನಾಂಗಗಳ ಸಮ್ಮಿಲನ, ಇಂದಿನ ಆವಶ್ಯಕತೆ ಮತ್ತು ಮುಂದಿನ ಆಕಾಂಕ್ಷೆ-ಇವು ಒಟ್ಟುಗೂಡಿ, ಭಾರತದ ಈ ಭಾಗದ ಏಕೀಕರಣವನ್ನು ಸಾಧ್ಯಗೊಳಿಸುವಂತೆ ಕನ್ನಡಿಗರನ್ನು ಪ್ರೇರಿಸ ಬೇಕಾಗಿದೆ. ಹೀಗೆ ಹದಿನೈದು ಅಥವಾ ಇಪ್ಪತ್ತು ಭಾಷಾವಾರು ಪ್ರಾಂತಗಳು ಸುಸಂಘಟಿತವಾಗಬೇಕಾಗಿದೆ. ವಿಶಾಲವಾದ ಹಾಗೂ ಸಂಪತ್ಸಮೃದ್ಧವಾದ ಜೀವನದ ದೃಷ್ಟಿಯಿಂದ ಸುಸಜ್ಜಿತವಾದ ಸೈನ್ಯದ ನೆರವಿನೊಡನೆ ದೇಶದ

ಸ್ವಾತಂತ್ರ್ಯಕ್ಕೆ ಹೋರಾಟ ನಡಸಬೇಕಾಗಿದೆ. ಹಿರಿ ಕಿರಿಯ ತಾಯಿಯರಲ್ಲಿಯೂ ಸಮಾನ ವಾತ್ಸಲ್ಯವನ್ನಿರಿಸಿಕೊಳ್ಳಬೇಕಾಗಿದೆ. ಕನ್ನಡ ಚಳುವಳಿ ಜನತಾ ಆಂದೋಲನವಾಗಿ ಮಾರ್ಪಾಡಾಗುತ್ತಿದೆ. ಕನ್ನಡಿಗರ ಆಶೆ ಆಕಾಂಕ್ಷೆಗಳು, ಆಗತ್ಯಗಳು, ಅವರ ಬಾಳುವೆಗಳು ವಿಷಮ ಸ್ಥಿತಿಯಲ್ಲಿವೆ. ಈ ಕಾರಣದಿಂದಲೇ ಆಂದೋಲನ ಪ್ರಾರಂಭವಾದದ್ದು. ನೀರಾವರಿ ಯೋಜನೆಗಳು, ಬಂದರುಗಳು, ವಿಶ್ವವಿದ್ಯಾನಿಲಯಗಳು, ಬೇಂಕುಗಳು, ಉದ್ಯಮಗಳು, ಆರ್ಥಿಕ ಮೂಲಗಳು, ಶಿಕ್ಷಣ ಮಾಧ್ಯಮ—ಈ ಒಂದೊಂದೂ ಚಳುವಳಿಯ ವಿಷಯವಾಗಬೇಕು. ಸಾಂಸ್ಕೃತಿಕ ನಿಷ್ಠೆ ರಾಜಕೀಯ ನಿಷ್ಠೆಯಾಗಿಯೂ ಪರಿಣಮಿಸಬೇಕು. ಹಳೆಯ ಸಾಮ್ರಾಜ್ಯಗಳು ಛಿದ್ರವಿಚ್ಛಿದ್ರವಾದುವು; ವಿಜಯನಗರ ಸಾಮ್ರಾಜ್ಯ ಸಹ. ಅದಕ್ಕೆ ಕಾರಣವೂ ಇತ್ತು. ಗತಕಾಲದ ಕಹಿ ಘಟನೆಗಳಿಂದ ನಾವು ಪಾಠ ಕಲಿತುಕೊಳ್ಳುವೆವೆ? ಮತ್ತೆ ನಾವೆಂದೂ ಒಡೆಯದೆ, ಇತರರ ಆಳ್ವಿಕೆಗೆ ಅನುವು ಮಾಡಿಕೊಡುವುದಿಲ್ಲವೆಂದು ಸಂಕಲ್ಪ ತೊಡುವೆವೆ! [26]

ಶ್ರೀಯವರ ಈ ಲೇಖನದಿಂದ ಕನ್ನಡ ಚಳುವಳಿಯ ಸ್ವರೂಪದರ್ಶನವಾಗುತ್ತದೆ; ಸುಂದರ ಸುಸಮೃದ್ಧ ಭವಿಷ್ಯ ಕರ್ಣಾಟಕದ ಸಮಗ್ರದರ್ಶನವಾಗುತ್ತದೆ. 'ಪಳಿಯ ಕರ್ಣಾಟಕಂ ಮತ್ತೊರ್ಮೆ ಕಟ್ಟುಗೆ! ಎಳೆಯ ಕರ್ನಾಟಕಂ ಪೊಸ ಪುಟ್ಟು ಪುಟ್ಟುಗೆ!' ಎಂಬ ಅವರ ಹಂಬಲ ಅದರಲ್ಲಿ ಪಡಿಮೂಡಿದೆ. ಒಲುಮೆಗಿಂತ ಗೆಲವಿಲ್ಲ. ಒಕ್ಕೂಟಕ್ಕಿಂತ ಬಲವಿಲ್ಲ. ಸಣ್ಣದನ್ನು ದೊಡ್ಡದು ಮಾಡದೆ, ದೊಡ್ಡದನ್ನು ಸಣ್ಣದು ಮಾಡದೆ, ತಾಳ್ಮೆ ಶಿಸ್ತು ಅಚ್ಚುಕಟ್ಟು, ಒಕ್ಕೂಟ, ಒಲುಮೆ ಇವು ಕಲೆತರೆ ಕನ್ನಡನಾಡಿನ ಮಣ್ಣು ಹೊನ್ನಾಗುವುದು; ಬಾಳು ಬಾನಾಗುವುದು'[27] ಎಂಬ ಅವರ ಕನವರಿಕೆಯಲ್ಲಿ ಕನ್ನಡವನ್ನು ಕುರಿತ ಕುದಿತವಿದೆ, ಮೊರೆತವಿದೆ. 'ಧರ್ಮದ ಹೊಸಹುಟ್ಟು, ಭಾರತದ ಬಿಡುಗಡೆ, ಕರ್ನಾಟಕದ ಒಕ್ಕೂಟ, ಕನ್ನಡದಲ್ಲಿ ವಿಶ್ವಸಂಸ್ಕೃತಿ ಇವು ಎಲ್ಲೆಲ್ಲಿ ಮಿಡಿಯುತ್ತವೆ ಅಲ್ಲಿ ನಾನೂ ಮಿಡಿಯುತ್ತೇನೆ'[28] ಈ ಹಂಬಲ ಅವರು ಎಂದೋ ತೋಡಿಕೊಂಡದ್ದಲ್ಲ, ಇಂದಿಗೂ ನಮ್ಮ ಕಿವಿಗಳಲ್ಲಿ ಅವರು ಪಿಸುಗುಟ್ಟುತ್ತಿರುವಂತೆ ತೋರುತ್ತದೆ. ಕೃತಜ್ಞತೆಯುಳ್ಳ, ಜೀವಂತವಾಗಿರುವ, ಸ್ವಾಭಿಮಾನವಿರುವ ಕನ್ನಡಿಗರಿಗೆ ಮಾತ್ರ ಈ ಪಿಸುದನಿ ಕೇಳಿಸೀತು. 'ನನ್ನ ಕನ್ನಡದ ಉರುಬಿನಲ್ಲಿ ಕಾವುನೋವುಗಳಿಗೆ ಎಡೆ ಕೊಟ್ಟಿದ್ದೇನೆ, ಕನ್ನಡಕ್ಕಾಗಿ, ಕನ್ನಡ ನಾಡಿಗಾಗಿ; ಹಟಕ್ಕಲ್ಲ,

[26] ಶ್ರೀ ಸಾಹಿತ್ಯ, ಪುಟ ೮೨೯–೩೦ ಆಂಗ್ಲ ಲೇಖನದ ಭಾವಾನುವಾದ

[27-28] ,, ೩೩೫

ನಾನು ಕಂಡ ದಿಟಕ್ಕಾಗಿ, ಮರೆತುಬಿಡಿ, ಮನ್ನಿಸಿಬಿಡಿ' ಎಂಬ ಅವರ ಮೊರೆಯಲ್ಲಿ ನಯವಿದೆ, ದೈನ್ಯವಿದೆ, ನೋವಿದೆ. ಯಾವುದೋ ಪುಸ್ತಕಕ್ಕೆ ಬರೆದ ಮುನ್ನುಡಿಯಲ್ಲಿಯೂ

ಕನ್ನಡ ನುಡಿಗೆ,
ಮಿಡಿಗೆ, ಕಿಡಿಗೆ,
ನೆಗೆ ಓ ಜೀವಾ,
ಓ ನನ್ನ ಜೀವಾ.

ಎಂದು ಸಂಬೋಧಿಸುವಲ್ಲಿ ಅವರ ಎದೆಯ ತವಕದ ಅವರ ನಿಟ್ಟುಸಿರಿನ ಪರಿಚಯವಾಗುತ್ತದೆ.

ಶ್ರೀಯವರು ಕನ್ನಡ ನಾಡನುಡಿಗಳ ಶ್ರೇಯಸ್ಸಿಗಾಗಿ ಮಾಡಿದ ತ್ಯಾಗ ಅಪಾರ. ಅವರ ಕನ್ನಡದ ಹುಚ್ಚು ಮಡದಿಮಕ್ಕಳಿರಲಿ, ಆಂಗ್ಲಮೋಹವನ್ನು ಸಹ ಮರೆಯಿಸುತ್ತದೆ. ನೃಪತುಂಗ ಪಂಪರೇ ಪುಲಿಕೇಶಿ ಕೃಷ್ಣರೇ ಅವರ ಎದೆಯೊಳಗೆ ಅವಿತು, ಅವರ ಚಿತ್ಕೋಶದಲ್ಲಿ ಜ್ಞಾನವಾಗಿ, ಕಣ್ಣಲ್ಲಿ ಬೆಳಕಾಗಿ, ನಾನಾ ರೀತಿಯಲ್ಲಿ ಅವರನ್ನು ಪ್ರಚೋದಿಸಿದ್ದಾರೆ. ಹಿರಿಯರಿಂದ ತಮ್ಮ ಕೈಗೆ ಬಂದ ನಂದದ ಕುಂದದ ಕಂದದ ಚೆಂದದ ಬಾವುಟವನ್ನು ನಭಕ್ಕೆ ಚಿಮ್ಮಿಸಿ 'ಏರಿಸಿ, ಹಾರಿಸಿ, ಕನ್ನಡದ ಬಾವುಟ!' ಎಂದು ತನ್ನವರಿಗೆ ಕರೆಕೊಡುತ್ತಾರೆ.

ಬಾಳು ಎಲೆ ಬಾವುಟ!
ಬಾಳ್ ಕನ್ನಡ ತಾಯ್,
ಏಳ್ ಕನ್ನಡ ತಾಯ್,
ಆಳ್ ಕನ್ನಡ ತಾಯ್,
ಕನ್ನಡಿಗರೊಡತಿ ಓ ರಾಜೇಶ್ವರಿ!

ಎಂದು ಧ್ವಜಹಸ್ತರಾಗಿ ಕನ್ನಡ ನಾಡನ್ನೆಲ್ಲ ಸುತ್ತುತ್ತಾರೆ. ಕೊನೆಗೆ ಕಣ್ಮುಚ್ಚುವ ಮುನ್ನ ಈ ಕನ್ನಡತಾಯಿಯ ಕಂದ

ಕನ್ನಡ ನುಡಿಪಯಿರ್ ಮುನ್ನಡೆ ತೆನೆತುಂಬಿ,
ಪೊನ್ನಡಕಿಲ್ಲಂ ಪೊನ್ನಕ್ಕೆ.
ಬೀಡುಂಬಯಲ್ ಮಲೆಕುಡಿವಾಳ್ಕೆ ಕರ್ಬುಜೇನ್
ಪಾಡುಂ ಪಿಳಿಗೆ ಮೇಣ್ ಬಿಡಿನುಡಿಯಂ.
ಬರೆವರ ಬಾಯೊಳೊಲವಿರ್ಕೆ ಚೆಲುವಿರ್ಕೆ,
ನಲವಿರ್ಕೆ, ನಾಡ ಗೆಲವಿರ್ಕೆ.

ಒರ್ನಾಡು ಕೂಡುಗೆ ತಾನೇ ಒರ್ಪೆರ್ ಲೋಕಂ
ಕರ್ನಾಡು ಕಂಡ ಕಾಣ್ಕೆಗಳನ್
ಕನ್ನಡ ಕಣ್ಮಣಿಗಳ್ ಪೆಣ್ಮಣಿಗಳ್ ಕಟ್ಟಾಳ್ಗಳ್
ಚೆನ್ನನೆಯ ಬಾಳ್ಗೆ ಬೆಳಕಕ್ಕೆ.

ಎಂದು ಹಾರೈಸುತ್ತಾರೆ. ಸ್ವಾತಂತ್ರ್ಯ ಬಂದು ನಾಲ್ಕನೆಯ ದಶಕ ಕೊನೆ ಮುಟ್ಟುತ್ತಿದೆ; ಏಕೀಕರಣದ ರಜತೋತ್ಸವವೂ ಮುಗಿದಿದೆ. ಜನ್ಮ ಶತಮಾನೋತ್ಸವವನ್ನು ಆಚರಿಸುತ್ತಿರುವ ಈ ಪುಣ್ಯ ಸಂದರ್ಭದಲ್ಲಾದರೂ ಆ ದಿವ್ಯ ಚೇತನದ ಹಾರೈಕೆ ಪೂರೈಕೆಯಾಗುವುದೆ? ಅದು ಕನ್ನಡಿಗರೊಡತಿ ರಾಜೇಶ್ವರಿಗೆ ಮಾತ್ರ ಗೊತ್ತು!

ದೇಜಗೌ



ಅತೃಪ್ತಿಯೇ ವ್ಯಕ್ತಿಯ ಅಥವಾ ರಾಷ್ಟ್ರದ ಪ್ರಗತಿಯ ಪ್ರಥಮ ಸೋಪಾನವಾಗಿರುವುದು.

—ಆಸ್ಕರ್‌ವೈಲ್ಡ್

ದೇವಾಲಯವನ್ನು ತನ್ನ ಯಶಸ್ಸಿಗಲ್ಲದೆ, ದೇವರ ಸೇವೆ ಎಂದೇ ಕಟ್ಟಿಸುವವರಾರೂ ಅದರ ಮೇಲೆ ತಮ್ಮ ಹೆಸರನ್ನು ಕೆತ್ತಿಸುವುದಿಲ್ಲ.

—ಅಲೆಕ್ಸಾಂಡರ್ ಪೋಪ್

ಜನರು ಸಾಮಾನ್ಯವಾಗಿ ತಮಗೆ ಹೊಳೆದ ಕಾರಣಗಳನ್ನು ಒಪ್ಪುತ್ತಾರೆ ವಿನಾ ಅನ್ಯರಿಗೆ ಹೊಳೆದ ಕಾರಣಗಳನ್ನಲ್ಲ.

—ಪಾಸ್ಕಲ್

# ಬಿ. ಎಂ. ಶ್ರೀಯವರು
# ನವೋದಯ ಸಾಹಿತ್ಯಕ್ಕೆ ನೀಡಿದ ಸ್ಫೂರ್ತಿ

೧

ಕನ್ನಡದ ಕಣ್ವರೆಂದೂ ಕಾರಣಪುರುಷರೆಂದೂ ಕೀರ್ತಿಶಾಲಿಯಾಗಿರುವ ಬಿ. ಎಂ. ಶ್ರೀಯವರು 'ನವೋದಯ' ಸಾಹಿತ್ಯಕ್ಕೆ ಸ್ಫೂರ್ತಿದಾಯಕರಾಗಲು ಕಾರಣೀಭೂತವಾದುದು ಅವರ ಅಭಿಜಾತವಾದ ಕನ್ನಡ ಪ್ರೇಮ. ಅವರ ಈ ಪ್ರೇಮ ಕುರುಡು ಅಭಿಮಾನದ ಭಾವೋದ್ರೇಕವಾಗಿರದೆ, ಕನ್ನಡದ ದುಸ್ಥಿತಿ-ದುರವಸ್ಥೆಯ ಕುರಿತ ಚಿಂತೆ-ಚಿಂತನೆಗಳ ಪರಿಪಾಕಸ್ವರೂಪದ ಪ್ರಜ್ಞೆಯಾಗಿದ್ದಿತು.

ಶ್ರೀಯವರು ಮದ್ರಾಸಿನಲ್ಲಿ ವಿದ್ಯಾರ್ಥಿಯಾದಾಗಿನಿಂದಲೇ ಕನ್ನಡದ ಸ್ಥಿತಿ, ಕನ್ನಡ ಸಾಹಿತ್ಯದ ಗತಿಯನ್ನು ಕುರಿತಂತೆ ಯೋಚಿಸಲು ತೊಡಗಿದ್ದರು. ಪಾಶ್ಚಾತ್ಯ ಸಾಹಿತ್ಯದ ಅಧ್ಯಯನ, ಆಧುನಿಕ ಸಾಹಿತ್ಯದ ಸಮಾಲೋಚನದ ಹಿನ್ನೆಲೆಯಲ್ಲಿ ನಮ್ಮ ಪ್ರಾಚೀನ-ಅರ್ವಾಚೀನ ಸಾಹಿತ್ಯವನ್ನು ಅಳೆದು ತೂಗಿ, ಅದರ ಸಂಪ್ರದಾಯ ಜಡತೆಯನ್ನು ಕೊಡವಿ ಹಾಕುವ, ಅದಕ್ಕೆ ಹೊಸತನವನ್ನು ಕಸಿಮಾಡುವ ಕನವರಿಕೆಯಿಂದ ಹೊಸ ಉಳುಮೆಗೆ ನೆಲವನ್ನು ಹದಗೊಳಿಸಲು ಅಣಿಯಾಗುವ ಕನಸನ್ನು ಕಾಣಲನುವಾಗಿದ್ದರು. ಇಂಗ್ಲಿಷ್ ಅಧ್ಯಾಪಕರಾಗಿ ಮೈಸೂರಲ್ಲಿ ನೆಲೆನಿಂತು ಎರಡು ವರ್ಷಗಳಾದ ಮೇಲೆ ಅಂದರೆ ೧೯೧೧ರಲ್ಲಿ, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ನೀಡಿದ ಉಪನ್ಯಾಸ ಅವರ ಕನ್ನಡ ನಾಡು-ನುಡಿಯ ಬಗೆಗಿನ ಕಾಳಜಿಯನ್ನೂ ದೂರದೃಷ್ಟಿಯನ್ನೂ ತಿಳಿಸುತ್ತದೆ.

ಈ ಉಪನ್ಯಾಸದಲ್ಲಿ ಅವರು ಸಮಕಾಲೀನ ಸಾಹಿತ್ಯದ ಶೋಚನೀಯ ಸ್ಥಿತಿಯನ್ನು ಬಣ್ಣಿಸಿದ್ದಾರೆ. ಕಾವ್ಯವಸ್ತುವಿನಲ್ಲಿಯ ಗತಾನುಗತಿಕತೆ, ಕಾವ್ಯ ರೀತಿಯಲ್ಲಿಯ ['ಸೂತ್ರಕ್ಕೆ ಸ್ವತಂತ್ರವನ್ನು ಮಾರಿಕೊಂಡ'] ದಾಸ್ಯಪ್ರವೃತ್ತಿ, ಭಾವಗಳಲ್ಲಿಯ ಕ್ಲೀಷೆ, ವರ್ಣನೆಗಳಲ್ಲಿಯ ವಿಕೃತಿ, ಶೈಲಿಯಲ್ಲಿಯ ಒಣ ಆಡಂಬರ, ಜನಸಾಮಾನ್ಯರಿಗೆ ಪ್ರಿಯವಾಗದ ಪದ್ಯರೂಪದ ಬಳಕೆ—ಈ ಆರು ದೋಷಗಳು ತಕ್ಷಣವೇ ಪರಿಹರಿಸಲ್ಪಡಬೇಕಾಗಿವೆ ಎಂದು ಕರೆಕೊಟ್ಟಿದ್ದಾರೆ.

ಜೊತೆಗೆ ಹಳೆಯ ಗ್ರಂಥಗಳ ಶೇಖರಣೆ-ಶೋಧನೆಯ ಮೂಲಕ ಪರಂಪರೆಯ ಹುರುಳನ್ನು ಉಳಿಸಿಕೊಳ್ಳಬೇಕೆಂದೂ ಆಧುನಿಕ ಪ್ರಜ್ಞೆಯ ಬೆಳಕಿನಲ್ಲಿ ಹೊಸ ಶಾಸ್ತ್ರಗ್ರಂಥಗಳನ್ನು ರಚಿಸಬೇಕೆಂದೂ ಪ್ರತಿಪಾದಿಸಿದ್ದಾರೆ. ಮುಂದುವರಿದು, ಭವಿಷ್ಯತ್ತಿನಲ್ಲಿ ಕನ್ನಡ ಸಾಹಿತ್ಯವು ಕ್ರಮಿಸಬೇಕಾದ ದಾರಿಯ ಒಂದು ನೀಲ ನಕ್ಷೆಯನ್ನೇ ಬಿಡಿಸಿದ್ದಾರೆ:

"ಹೇಗೆ ಆದಿಯಿಂದಲೂ ಸಂಸ್ಕೃತದ ಶಿಕ್ಷೆಯಲ್ಲೂ ಸಂಸ್ಕೃತದ ಪೋಷಣೆಯಲ್ಲೂ (ನಮ್ಮ) ಕಾವ್ಯಮಾಲೆಯನ್ನು ಬೆಳೆಸಿದೆವೋ ಹಾಗೇ ಈಗ ದೈವ ಯತ್ನದಿಂದ ಲಭಿಸಿರುವ ಇಂಗ್ಲಿಷಿನ ಶಿಕ್ಷೆಯಲ್ಲೂ ಇಂಗ್ಲಿಷಿನ ಪೋಷಣೆಯಲ್ಲೂ ಅದನ್ನು ಬೆಳಸಬೇಕು. ಇಂಗ್ಲಿಷಿನ ಕಾವ್ಯಮಾಲೆ ಪರಮೋತ್ಕೃಷ್ಟವಾದದ್ದು; ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್, ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿಯಾದದ್ದು. ಇದರ ಗುಣವನ್ನು ಕಲಿತು, ಇದರ ಐಶ್ವರ್ಯದಲ್ಲಿ ಭಾಗಿಗಳಾಗಿ, ಬೇಕಾದ ರೀತಿಯಲ್ಲಿ ಭಾಷಾಂತರಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿಟ್ಟರೆ, ಮುಂದೆ ಸ್ವದೇಶಮಾರ್ಗವೂ ವಿದೇಶ ಮಾರ್ಗವೂ ಕಲೆತು ಒಂದಾಗಿ, ಎರಡರಲ್ಲೂ ಒಗ್ಗದುವು, ವಕ್ರವಾದುವು, ಬಿಟ್ಟು ಹೋಗಿ, ಅತ್ಯುತ್ತಮವಾದ ಕಾವ್ಯಮಾಲೆ ನಮ್ಮಲ್ಲೂ ನಿಲ್ಲುವುದಕ್ಕೆ ಸಂದೇಹ ತೋರುವುದಿಲ್ಲ."

ಇದನ್ನು ಪರಿಶೀಲಿಸಿದರೆ ಶ್ರೀಯವರಿಗೆ ಪರಂಪರೆಯ ಪ್ರಜ್ಞೆ, ಸಮಕಾಲೀನ ಸ್ಥಿತಿ-ಗತಿಯ ಅರಿವಿನೊಂದಿಗೆ, ಭವಿಷ್ಯತ್ತಿನ ಗುರಿ-ನಿರಿಯ ಸ್ಪಷ್ಟವಾದ ತಿಳಿವೂ ಇದ್ದಿತೆಂಬುದು ವಿದಿತವಾಗುತ್ತದೆ.

ಈ ಹಿನ್ನೆಲೆಯಲ್ಲಿಯೇ ಶ್ರೀಯವರ ಪ್ರತಿಭೆ ಕನ್ನಡಕ್ಕೆ ನವಚೈತನ್ಯವನ್ನು ತಂದುಕೊಡಲು ಮುಂದಾಗಿ, ಪ್ರಯೋಗಶೀಲವಾಯಿತು; "ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿ" ಆಯ್ದ ಇಂಗ್ಲಿಷ್ ಕವನಗಳ ಅನುವಾದಕ್ಕೆ ಕೈಹಾಕಿತು. ಪರಿಣಾಮವಾಗಿ, ಕನ್ನಡದ ಸುದೈವ ತೆರೆಯಿತೆಂಬಂತೆ, ಅವರ "ಇಂಗ್ಲಿಷ್ ಗೀತಗಳು" [೧೯೨೧] ಪ್ರಕಟವಾಗಿ ನಮ್ಮ ಸಾಹಿತ್ಯದ 'ನವೋದಯ'ಕ್ಕೆ ಶ್ರೀಕಾರ ಹಾಕಿ, ಸ್ಫೂರ್ತಿಯ ಸೆಲೆಯಾಯಿತು.

೨

ಈ ಮುಂಚೆ ಅಂದರೆ ಹೊಸಗಾಲದ ನಸುಕು ಎನ್ನಬಹುದಾದ ಸಂಕ್ರಮಣ ಕಾಲದಲ್ಲಿ ಇಂಗ್ಲಿಷ್ ಕವನಗಳ ಬಿಡಿಬಿಡಿಯಾದ ಅನುವಾದಗಳು ಬರತೊಡಗಿ

ದ್ದವು. ಆದರೆ ಆ ಪೈಕಿ ಬಹಳಷ್ಟು ಅನುವಾದಗಳಲ್ಲಿ ಇನ್ನೂ ಹಳೆಯ ಛಂದೋರೂಪ–ಭಾಷಾಪ್ರಯೋಗಗಳ ಹಳಸಲು ವಾಸನೆ ಉಸಿರುಕಟ್ಟುವಂತೆ ಇಡುಗಿದ್ದಿತು. ಅದಕ್ಕೆ ಪ್ರತಿಯಾಗಿ ಇಲ್ಲಿ ಮಾತ್ರ ಮೊದಲಬಾರಿಗೆ ಅದನ್ನು ಮೀರಿದ ಆಧುನಿಕತೆಯ ತಾಜಾತನ ತುಂಬಿದ್ದಿತು. ಇಲ್ಲಿಯ ಹೊಚ್ಚಹೊಸ ಜೀವನಾನುಭವ; ಹಳೆಯ ಛಂದೋಲಯಗಳನ್ನೆ ಆಧರಿಸಿದ, ಇಂಗ್ಲಿಷ್ ಮಟ್ಟುಗಳಿಗೆ ಹೋಲಬಹುದಾದ ಹೊಸ ಛಂದಸ್ಸಿನ ನಡಿಗೆ; ಆದಿಪ್ರಾಸದ ಬಿಗಿಕಟ್ಟು ಮೀರಿದ ಅಂತ್ಯಪ್ರಾಸದ ಹಿತಮಿತ ಬಳಕೆ; ಮನಸೆಳೆವ ಹೊಸಗನ್ನಡ ಭಾಷೆಯ ಅಳವಡಿಕೆ—ಇವೆಲ್ಲವುಗಳ ಫಲವಾಗಿ ಜಡ್ಡುಗಟ್ಟಿದ್ದ ನಮ್ಮ ಸಾಹಿತ್ಯದಲ್ಲಿ ಹೊಸ ರಕ್ತಸಂಚಾರವಾಯಿತು. ಶ್ರೀಯವರ ಅಭಿಜಾತ ಪ್ರತಿಭೆ, ಅನುವಾದಕಾರ್ಯದ ಕೃತಕತೆಯ ಕಂದರವನ್ನು ದಾಟಿ, ಅನುಸೃಷ್ಟಿಯ ಪಥದಲ್ಲಿ ಹೆಜ್ಜೆ ಹಾಕುವಲ್ಲಿ ಕೃತಾರ್ಥವಾಯಿತು. ಇದನ್ನೇ ಎತ್ತಿತೋರುವಂತೆ ದ. ರಾ. ಬೇಂದ್ರೆಯವರು "ಇಲ್ಲಿಯ ಕಾವ್ಯರಸದಲ್ಲಿ ಇವರ (ಶ್ರೀಯವರ) ಜೀವರಸ ಬೆರತು ಆದ ರಸಾಯನ" ಈ ಸಂಕಲನ ಎಂದು ಮಾರ್ಮಿಕವಾಗಿ ನುಡಿದಿದ್ದಾರೆ, ಒಂದು ದೃಷ್ಟಿಯಿಂದ ಇಲ್ಲಿಯ ಕವನಗಳು ಸ್ವತಂತ್ರ ಸೃಷ್ಟಿಗಳೇ ಎಂಬಂಥ ಅನುಭವವನ್ನು ರಸಿಕರಿಗೆ ನೀಡುತ್ತವೆ ಎಂಬುದನ್ನು ಸೂಚಿಸಿದ್ದಾರೆ. ಹೀಗೆ ಈ ಸಂಕಲನ ಹೊಸ ಸೃಷ್ಟಿಕಾರ್ಯದ ಪ್ರಾಯೋಗಿಕ ಮಾದರಿಯೂ ಆಗಿ ಹೊಸ ಜನಾಂಗದ ಕಣ್ಣು ತೆರೆಯುವ ಮೂಲಕ ಯುಗ ಪ್ರವರ್ತಕ ಕೃತಿಯಾಯಿತು.

೩

ಈ ಕೃತಿಯ ಮೂಲಕ ಪ್ರಾಮುಖ್ಯತೆ ಪಡೆದ 'ಭಾವಗೀತೆ' ಎಂಬ ಕಾವ್ಯಪ್ರಕಾರ ಕನ್ನಡ ಸಾಹಿತ್ಯ ಪರಂಪರೆಗೆ ಹೊಚ್ಚಹೊಸತು. ನಮ್ಮ ಪ್ರಾಚೀನ ಸಾಹಿತ್ಯದ ವಚನ–ಕೀರ್ತನೆ ಮೊದಲಾದವುಗಳಲ್ಲಿ ಅದರ ಒಂದು ಹೊಳಹು ಕಂಡುಬರುವುದಾದರೂ ಆ ಕಾವ್ಯರೂಪಗಳು ಭಕ್ತಜೀವಿಗಳ ಪಾರಮಾರ್ಥಿಕ ಅನುಭವದ ಆವಿಷ್ಕರಣಕ್ಕೇ ಮುಡಿಪಾಗಿದ್ದುವು. ಆದರೆ ಆಧುನಿಕ ಕಾವ್ಯರೂಪವಾದ ಈ ಭಾವಗೀತೆ ಕವಿಗಳು ಲೌಕಿಕ ಅನುಭವದ ನಿರೂಪಣೆಗೆ, ವೈಯಕ್ತಿಕ ನೋವು–ನಿರಾಸೆ, ನಲವು–ಗೆಲುವು, ಕನಸು–ಕನವರಿಕೆಗಳ ಅಭಿವ್ಯಕ್ತಿಗೆ ಮುಕ್ತ ಮಾಧ್ಯಮವಾಯಿತು. ಪರಿಣಾಮವಾಗಿ ಕವಿ ಪ್ರತಿಭೆಗೆ ನೂತನ ರಾಜಮಾರ್ಗವೊಂದು ತೆರೆದುಕೊಂಡು ಹೊಸಗನ್ನಡ ಸಾಹಿತ್ಯದ ಸತ್ವ–ಸಮೃದ್ಧಿಗೆ ನೆರವಾಯಿತು. ಭಾವಗೀತೆಯಂತೆಯೇ 'ಕಥನಕವನ'ವೆಂಬ ನೂತನ ಕಾವ್ಯ

ಪ್ರಕಾರವೊಂದರ ಬೆಳವಣಿಗೆಗೂ ಈ ಸಂಕಲನ ಸ್ಫೂರ್ತಿನೀಡಿತು.

ಶ್ರೀಯವರ ಸ್ವತಂತ್ರ ಕವನಗಳ ಸಂಕಲನ 'ಹೊಂಗನಸು', ಚಾರಿತ್ರಿಕವಾಗಿ ಮಹತ್ವದ್ದಾಗಿದೆ. 'ಪ್ರಗಾಥ' ವೆಂಬ ಭಾವಗೀತೆಯ ಒಳಪ್ರಕಾರವೊಂದರ ಸೃಷ್ಟಿಗೆ ಪ್ರೇರಕಸ್ರೋತವಾದ 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' 'ಕನ್ನಡ ತಾಯ ನೋಟ' ಮತ್ತು 'ಶುಕ್ರಗೀತೆ' ಎಂಬ ಮೂರು ಪ್ರಗಾಥಗಳು ಇಲ್ಲಿವೆ.

೪

ನಾಟಕದ ಕ್ಷೇತ್ರದಲ್ಲಿಯೂ ಶ್ರೀಯವರು ಪ್ರೇರಣಾತ್ಮಕ ಪ್ರಯೋಗ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ನಾಟಕಗಳೇ ಇಲ್ಲವೆಂಬ ಮಾತಿಗೆ ಉತ್ತರವೆನ್ನುವಂತೆ, ರನ್ನ ಕವಿಯ 'ಸಾಹಸಭೀಮವಿಜಯಂ' ಕಾವ್ಯ ದಲ್ಲಿ ಅಂತರ್ಗತವಾಗಿದ್ದ ನಾಟ್ಯಸತ್ವಕ್ಕೆ ಅಲ್ಲಿ-ಇಲ್ಲಿ ಒಂದೆರಡು ಮಾತು ಸೇರಿಸಿ, 'ಗದಾಯುದ್ಧ ನಾಟಕಂ' ವೆಂಬ ಕಾವ್ಯನಾಟಕ ಜೀವತುಂಬಿ ನಿಲ್ಲುವಂತೆ ಮಾಡಿದ್ದಾರೆ. ಪಾಶ್ಚಾತ್ಯನಾಟ್ಯಪರಂಪರೆಯ ಪ್ರೇರಣೆ ನಮ್ಮ ನಾಟ್ಯಪ್ರತಿಭೆಗೆ ದಕ್ಕುವಂತಾಗಲಿ ಎಂಬ ಹಿರಿಯಾಸೆಯಿಂದ 'ಪಾರಸಿಕರು', 'ಅಶ್ವತ್ಥಾಮನ್' ಎಂಬ ನಾಟ್ಯಕೃತಿಗಳೆರಡನ್ನು ರಚಿಸಿದ್ದಾರೆ. ಮೊದಲನೆಯದು ಗ್ರೀಕ್ ನಾಟಕ ಕಾರ ಈಸ್ಕಿಲಸ್‌ನ ನಾಟಕದ ಪ್ರೌಢ ಅನುವಾದವಾದರೆ, ಎರಡನೆಯದು ಗ್ರೀಕ್ ನಾಟಕಕಾರನೇ ಆದ ಸಫೋಕ್ಲೀಸ್‌ನ 'ಅಜಾಕ್ಸ್' ನಾಟಕದಿಂದ ಪ್ರೇರಿತವಾದ ಪ್ರಾತಿಭಸತ್ವದಿಂದ ಕೂಡಿದ ಸ್ವತಂತ್ರಕೃತಿ; ನಮ್ಮ ಪೌರಾಣಿಕ ಕಥಾನಕದ ಸಾಮಗ್ರಿಯನ್ನೆ ಗ್ರೀಕ್ ರುದ್ರನಾಟಕದ ದೃಷ್ಟಿಯಿಂದ ಸಂಯೋಜಿಸಿ ಸೃಷ್ಟಿತವಾದ ನಮ್ಮ ಮೊತ್ತಮೊದಲ ರುದ್ರನಾಟಕ. ಇಲ್ಲಿಯ ಕಥಾನಕದ ನಿರ್ವಹಣೆ, ಶಕ್ತಿಸಂಪನ್ನ ಸಂವಾದ, ಪ್ರೌಢವಾದ ಭಾಷೆ, ಸರಳ ರಗಳೆಯ ಬಳಕೆ—ಇವೆಲ್ಲ ಈ ಬಗೆಯ ಕಾವ್ಯನಾಟಕಗಳ ಹೊಸ ಹುಳುಮೆಗೆ ಪ್ರೇರಕವಾಗಿವೆ.

೫

ಹೀಗೆ 'ನವೋದಯ' ದ ಕುರಿತ ಶ್ರೀಯವರ ಚಿಂತನೆ, ಪ್ರಯೋಗಗಳು ಅವರ ಮಿತ್ರರ, ಶಿಷ್ಯರ, ಅಭಿಮಾನಿಗಳ ಬಹು ದೊಡ್ಡ ಬಳಗದ ಮೇಲೆ ವಿಧಾಯಕವಾದ ಪ್ರಭಾವ ಬೀರಿ, ಅವರೆಲ್ಲ ಕ್ರಿಯಾಶೀಲರಾಗಿ ಕನ್ನಡದ ಶ್ರೀಮಂತಿಕೆಗೆ ಕಾಣಿಕೆ ಸಲ್ಲಿಸುವಂತೆ ಮಾಡಿವೆ.

"....ಕನ್ನಡದೊಳಿಂದಾವಾವ
ಕಲಕಂಠ ಕೇಳುತಿದೆ ಅದರ ಗಾನದೊಳೆಲ್ಲ
ತೋರುತಿದೆ ನೀವು ತೆರೆದಾನವ್ಯ ಅಕ್ಷುಲ್ಲ
ಧೀರಗತಿ, ಸುವಿಶಾಲ ವಿಶ್ವವಿಸ್ತರ ಭಾವ"

—ಎಂದು ನಮ್ಮ ಹಿರಿಯ ತಲೆಮಾರಿನ ಹಿರಿಯ ಸಾಹಿತಿ ಮಾಸ್ತಿಯವರು ಮಾಡಿರುವ ಮುಕ್ತಕಂಠದ ಈ ಗುಣಗಾನ ಶ್ರೀಯವರು ನವೋದಯ ಸಾಹಿತ್ಯಕ್ಕೆ ನೀಡಿದ ಸ್ಫೂರ್ತಿಯ ನೆಲೆಯನ್ನೂ ಅದರ ಪ್ರಭಾವದ ಬೆಲೆಯನ್ನೂ ಬಹು ಸಮರ್ಥವಾಗಿ ಪ್ರತಿಫಲಿಸಿದೆ.

ಎಂ. ಅಕಬರ ಅಲಿ



ಮನುಷ್ಯರು ಅನ್ಯಾಯವನ್ನೊಪ್ಪದಿರುವುದು ತಾವು ಅದರ ಬಲಿಗೆ ಬಿದ್ದೇವೆಂಬ ಭೀತಿಯಿಂದಲೇ ವಿನಹ ನ್ಯಾಯಪ್ರಿಯತೆಯಿಂದಲ್ಲ.

—ಪ್ಲೇಟೊ

ಎಲ್ಲಿ ಅಜ್ಞಾನ ಆಶೀರ್ವಾದ ಆಗಬಲ್ಲದೋ ಅಲ್ಲಿ ಜ್ಞಾನಿಯಾಗಿರುವುದು ಮೂರ್ಖತನವಾಗಿದೆ.

—ಥಾಮಸ್ ಗ್ರೇ

ದುಷ್ಟರನ್ನು ತಡೆದು ನಿಲ್ಲಿಸುವುದು ಒಳ್ಳೆಯದು; ಕನಿಷ್ಠ ಅವರ ದುಷ್ಕಾರ್ಯಗಳಲ್ಲಿ ಸೇರದಿರುವುದಾದರೂ ಒಳ್ಳೆಯದು.

—ಡೆಮೋಕ್ರಿಟಸ್

# ‘ಬಿ.ಎಂ.ಶ್ರೀ’ಯವರ ಭಾಷಾಂತರ ಕಲೆ

“ಸ್ವತಂತ್ರ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೇ ತರ್ಜುಮೆ” ಎಂದು ಡಿ. ವಿ. ಗುಂಡಪ್ಪನವರು ಒಂದು ಕಡೆ ಹೇಳಿದ್ದಾರೆ. ಬಿ.ಎಂ.ಶ್ರೀಕಂಠಯ್ಯನವರ ಭಾಷಾಂತರಗಳನ್ನು ಈ ಸೂಕ್ತಿಗೆ ನಿದರ್ಶನವಾಗಿ ಹೆಸರಿಸಬಹುದು. ‘ಇಂಗ್ಲಿಷ್ ಗೀತಗಳು’ (೧೯೨೬), ‘ಅಶ್ವತ್ಥಾಮನ್’ (೧೯೨೯), ‘ಪಾರಸಿಕರು’ (೧೯೩೩) ಮತ್ತು ‘ಇಸ್ಲಾಂ ಸಂಸ್ಕೃತಿ’ (೧೯೪೮)-ಇವೇ ಶ್ರೀಯವರ ಭಾಷಾಂತರಿತ ಕೃತಿಗಳು. ಇವುಗಳಲ್ಲಿ ಮೊದಲ ಮೂರು ಕೃತಿಗಳು ಮಾತ್ರವೇ ಸಾಹಿತ್ಯಿಕ ದೃಷ್ಟಿಯಿಂದ ಮುಖ್ಯವಾಗಿರುವಂಥವು. ‘ಇಂಗ್ಲಿಷ್ ಗೀತಗಳು’ ಕನ್ನಡ ಸಾಹಿತ್ಯದಲ್ಲಿ ನವೋದಯಕ್ಕೆ ನಾಂದಿಯನ್ನು ಹಾಡಿದಂಥ ಕೃತಿ, ‘ಅಶ್ವತ್ಥಾಮನ್’ “ಒಂದು ಅದ್ಭುತವಾದ ಸಾಧನೆ” ಎಂಬ ಕೀರ್ತಿಗೆ ಪಾತ್ರವಾದ ಕೃತಿ; ‘ಪಾರಸಿಕರು’ ಸೃಜನಾತ್ಮಕ ಅನುವಾದಕ್ಕೆ ಉದಾಹರಣೆಯಾಗಿರುವಂಥ ಕೃತಿ.

ಕಾಲಾನುಕ್ರಮದ ದೃಷ್ಟಿಯಿಂದ ಮಾತ್ರವಲ್ಲದೆ, ಮಹತ್ವದ ದೃಷ್ಟಿಯಿಂದಲೂ ಅಗ್ರಗಣ್ಯವಾಗಿರುವ ಕೃತಿ ‘ಇಂಗ್ಲಿಷ್ ಗೀತಗಳು’. “ಅದು ಪ್ರಕಟವಾದ ಗಳಿಗೆ ಅಮೃತಗಳಿಗೆ; ಅದನ್ನು ರಚಿಸಿದ ಹಸ್ತ ಅಮೃತಹಸ್ತ. ಅದಾದ ನಾಲ್ಕು ವರ್ಷಗಳಲ್ಲಿ ಅದೇನು ಬೆಳೆಯ ಚಿಹ್ನೆ ಕಂಡಿತು! ಅಲ್ಲಿಂದ ಈಚಿನ ಇಪ್ಪತ್ತು ವರ್ಷಗಳಲ್ಲಿ ಎಂಥ ಹುಲುಸು ಬೆಳೆ ಬೆಳೆದಿದೆ. ಅದರಲ್ಲಿ ಅದೆಷ್ಟು ಭಾಗ ಪ್ರತ್ಯಕ್ಷವಾಗಿ ಶ್ರೀಕಂಠಯ್ಯನವರ ಶಿಷ್ಯರಾಗಿದ್ದವರ ಕೆಲಸ! ನಿಜವಾಗಿಯೂ ಶ್ರೀಕಂಠಯ್ಯನವರು ಪುಣ್ಯಾತ್ಮರು” ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೂ “ಹೊಸ ಕವನಗಳಿಗೆ ಮಾರ್ಗದರ್ಶಕವಾಗಿ, ತರುಣರ ಮೆಚ್ಚಿಕೆಯದಾಗಿ ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ, ಅಕ್ಲಿಷ್ಟ ಪ್ರಸನ್ನ ಕಾವ್ಯ ಶೈಲಿಗೆ ಮಾದರಿಯಾಗಿ ನಿಲ್ಲುವುದು” ಎಂದು ದ.ರಾ. ಬೇಂದ್ರೆಯವರೂ “ಅವರು ತೆರೆದ ಮಾರ್ಗದಲ್ಲಿ ಕನ್ನಡ ಕವಿತೆ ಸೆರೆಗೊಂಡು ಹರಿಯಿತು” ಎಂದು ತೀ. ನಂ. ಶ್ರೀಕಂಠಯ್ಯನವರೂ ಬಗೆ ಬಗೆಯಾಗಿ ಈ ಸಂಕಲನದ ಮಹತ್ವವನ್ನು ಸಾರಿದ್ದಾರೆ. ಇದರಲ್ಲಿ ಜ್ಞಾತರಾಗಿರುವ ೩೦ ಮಂದಿ ಆಂಗ್ಲ ಕವಿಗಳ ೫೮ ಪದ್ಯಗಳೂ ಅಜ್ಞಾತ ಕವಿಗಳ ೨ ಪದ್ಯಗಳೂ ಶ್ರೀಯವರ ೩ ಸ್ವಂತ ರಚನೆಗಳೂ-ಹೀಗೆ ಒಟ್ಟು ೬೩ ಗೀತಗಳು ಸಂಕಲಿತವಾಗಿವೆ.

ಪ್ರಮಾಣದ ದೃಷ್ಟಿಯಿಂದ ನೋಡಿದರೆ, ಈ ಅನುಕ್ರಮವನ್ನು ಕಾಣ

ಬಹುದು : ಷೆಲ್ಲಿ (೯), ಬರ್ನ್ಸ್ (೭), ವರ್ಡ್ಸ್‌ವರ್ತ್ (೫) ಬ್ರೌನಿಂಗ್, ಟೆನಿಸನ್ ಮತ್ತು ಸ್ಕಾಟ್ (ತಲಾ ೩); ಕ್ಯಾಂಪ್‌ಬೆಲ್, ಕೌಪರ್, ಬೈರನ್, ಕೋಲ್‌ರಿಜ್, ಷೇಕ್ಸ್‌ಪಿಯರ್ ಮತ್ತು ಸದೆ (ತಲಾ ೨) ಹಾಗೂ ಇತರ ೧೬ ಕವಿಗಳು (ತಲಾ ೧)-ಅಜ್ಞಾತಕರ್ತೃಕವಾಗಿರುವ ೨ ಗೀತಗಳನ್ನು ಹಾಗೂ ಶ್ರೀಯವರ ೩ ಸ್ವಂತ ರಚನೆಗಳನ್ನು ಬಿಟ್ಟು. ಈ ಆಯ್ಕೆ ಆಧಾರವಾಗಿರುವ ಸಂಗತಿಗಳು ಯಾವುವು ಎಂಬುದನ್ನು ಶ್ರೀಯವರು ಹೀಗೆ ವಿವರಿಸಿದ್ದಾರೆ: (i) "ಇಂಗ್ಲಿಷ್ ಕಾವ್ಯಮಾರ್ಗವನ್ನು ಕನ್ನಡಿಗರು ಈ ಸಣ್ಣ ಗ್ರಂಥದಿಂದ ಸ್ವಲ್ಪ ಮಟ್ಟಿಗಾದರೂ ತಿಳಿಯಬಹುದು ; (ii) ವಿಶ್ವ ಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯ ವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೋ ಅದನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನು ಶಿಕ್ಷಣ ಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನೇ ತಾಳಲಿ".

ಉದ್ದೇಶ ಹೀಗಿದ್ದರೂ "ಇಲ್ಲಿ ಕೊಟ್ಟಿರುವ ಕವನಗಳೆಲ್ಲಾ ಇಂಗ್ಲಿಷ್ ಕಾವ್ಯ ಮಾಲೆಯ ನಾಯಕರತ್ನಗಳೆಂದು ಆದುಕೊಂಡವಲ್ಲ. ಉತ್ತಮರಾದ ಕವಿಗಳು ಇಲ್ಲಿ ಎಲ್ಲರೂ ಇಲ್ಲ. ಆಗಾಗ್ಗೆ ಓದುತ್ತಿರುವಾಗ ನನ್ನ ಮನಸ್ಸಿಗೊಪ್ಪಿ, ನನ್ನ ಕೈಮೀರದುವಾಗಿ ಕಂಡು ಬಂದ ಗೀತಗಳಿವು" ಎಂಬ ಸ್ಪಷ್ಟೀಕರಣವನ್ನೂ ಕೊಟ್ಟಿದ್ದಾರೆ. ಅಷ್ಟೇ ಅಲ್ಲ, ತಮ್ಮ ಒಲವು ಯಾವುದರತ್ತ ಹಾಗೂ ಏಕೆ ಹರಿದಿದೆ ಎಂಬುದನ್ನೂ ಅವರು ಸ್ಪಷ್ಟಪಡಿಸಿದ್ದಾರೆ: "ಇಂಗ್ಲಿಷ್ ಕವಿಗಳು ಶೃಂಗಾರರಸವನ್ನು ಹೇಗೆ ಗಂಭೀರವಾಗಿಯೂ ಸೂಕ್ಷ್ಮವಾಗಿಯೂ ಸ್ವಾಭಾವಿಕವಾಗಿಯೂ ತೋರಿಸುವರೆಂಬುದನ್ನು ತಿಳಿಸುವುದಕ್ಕಾಗಿ ಆ ಬಗೆಯ ಗೀತಗಳು ಕೊಂಚ ಹೆಚ್ಚಾಗಿ ಬಂದಿವೆ. ಇಂಗ್ಲಿಷ್ ಸಾಹಿತ್ಯ ಸಮುದ್ರದ ಕರೆಯಲ್ಲಿ ತೆರೆಯೆಸೆದ ಈ ಕೆಲವು ಸಣ್ಣ ಚಿಪ್ಪುಗಳಿಂದ ಆ ದಿವ್ಯ ರತ್ನಾಕರದ ಲಾವಣ್ಯವೂ ವಾಸನೆಯೂ ಘೋಷವೂ ರುಚಿಯೂ ಸಹೃದಯರ ಅನುಭವಕ್ಕೆ ಸಿದ್ಧಿಸದೆ ಇರಲಾರವು."

ಇವೆಲ್ಲಕ್ಕಿಂತ ಹೆಚ್ಚಾಗಿ ಶ್ರೀಯವರನ್ನು ಇಂಥ ಸಾಹಸದಲ್ಲಿ ತೊಡಗಿಸಿದ ಒಂದು ಆಂತರಿಕ ಅಭೀಪ್ಸೆಯೂ ಉಂಟು. ನಮ್ಮ ಹೆಣ್ಣಾದ ಕನ್ನಡ ನುಡಿ

ಹಾಗೂ ಪಡುವ ಕಡಲ ಹೊನ್ನ ಹೆಣ್ಣಾದ ಇಂಗ್ಲಿಷ್ ಭಾಷೆ ತಮ್ಮನ್ನು ಒಲಿಸಿ, ನಲಿಸಿ, ಕಲಿಸಿ ಕುಣಿಸುತ್ತಿದ್ದಾಗ,

"ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ."

—ಎಂದು ಶ್ರೀಯವರೇ 'ಕಾಣಿಕೆ'ಯಲ್ಲಿ ಹೇಳಿಕೊಂಡಿದ್ದಾರೆ.

ಹೀಗೆ ತಾವು ಆಯ್ದುಕೊಂಡ ಗೀತಗಳನ್ನು ಭಾಷಾಂತರಿಸುವಲ್ಲಿ ತಾವು ಅನುಸರಿಸಿದ ವಿಧಾನ ಯಾವುದೆಂಬುದನ್ನು ಶ್ರೀಯವರು ಹೀಗೆ ನಿರೂಪಿಸಿದ್ದಾರೆ: " 'ಭಾಷಾಂತರಕಾರರು ಕೊಲೆಗಾರರು' ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆಯುಂಟು. ಆ ಅಪವಾದವನ್ನು ತಪ್ಪಿಸಿಕೊಂಡಿರುವೆನೆಂದು ನಾನು ತಿಳಿದುಕೊಂಡಿಲ್ಲ. ಆದರೆ ನನ್ನ ಬುದ್ಧಿ ಬಲವಿರುವ ಮಟ್ಟಿಗೂ ಮೂಲವನ್ನು ಪ್ರತಿಬಿಂಬಿಸುವ ಕರ್ತವ್ಯವನ್ನೇ ಮುಂದಿಟ್ಟುಕೊಂಡು ಕೆಲಸ ಮಾಡಿದ್ದೇನೆ. ಕೆಲವು ಕಡೆ ಹೆಸರು ಭಾವ ಮುಂತಾದುವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ ಸಾಮಾನ್ಯವಾಗಿ ಪದ ಪ್ರಯೋಗ ಶೈಲಿ, ಛಂದಸ್ಸು, ಭಾವ, ರಸ-ಇವೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ. ಇಂಗ್ಲಿಷ್ ಬಲ್ಲವರು ಇದನ್ನು ತಿಳಿಯಬಲ್ಲರು. ಅಚ್ಚಗನ್ನಡಿಗರು ಈ ಭಾಗದಲ್ಲಿ ಅಸಮಾಧಾನ ಪಡಬಾರದೆಂದು ನನ್ನ ಪ್ರಾರ್ಥನೆ."

ಶ್ರೀಯವರ ಈ ಮಾತುಗಳಲ್ಲಿ ಆಶಯದ ಉದಾತ್ತತೆ, ಆಯ್ಕೆಯ ಒಲವು ನಿಲವು ಹಾಗೂ ಕಾರಣ ಮತ್ತು ಸ್ವಸಾಮರ್ಥ್ಯದ ಬಗೆಗಿನ ವಿನಯಪೂರ್ಣ ಧೋರಣೆ ಎದ್ದುಕಾಣುತ್ತವೆ. ತಾವು ಕೈಗೊಂಡ ಕಾರ್ಯಕ್ಕೆ ಶ್ರೀಯವರು ಅಸಮರ್ಥರೇನೂ ಆಗಿರಲಿಲ್ಲ. "ಹಿಂದಿನ ಜನ್ಮದಲ್ಲಿ ಶ್ರೀಯವರು ಆಕ್ಸ್‌ಫರ್ಡ್‌ನಲ್ಲೋ ಕೇಂಬ್ರಿಜ್‌ನಲ್ಲೋ ಪ್ರಾಧ್ಯಾಪಕರಾಗಿದ್ದಿರಬೇಕು" ಎಂದು ಒಬ್ಬ ವಿದ್ವಾಂಸರು ಉದ್ಗಾರವೆತ್ತಿರುವುದೂ ಉಂಟು. ಇಷ್ಟಾಗಿಯೂ ನಾವು ನೆನಪಿಡಬೇಕಾದ ಸಂಗತಿ ಯಾವುದೆಂಬುದನ್ನು ಡಾ॥ ಪ್ರಭುಶಂಕರ ಅವರು ಹೀಗೆ ಸೂಚಿಸಿದ್ದಾರೆ: "ಕವಿಯ ಎಲ್ಲ ಕವನಗಳೂ ಹೇಗೆ ಸಿದ್ಧಿಯ ಶಿಖರವನ್ನು ಮುಟ್ಟಿ

ಲಾರವೋ ಹಾಗೆಯೇ ಅನುವಾದಕರ ಎಲ್ಲ ಅನುವಾದಗಳೂ ಸಂಪೂರ್ಣವಾಗಿ ಸಮರ್ಪಕವಾಗಲಾರವು.”

ಈ ಹಿನ್ನೆಲೆಯಲ್ಲಿ ಶ್ರೀಯವರ ಅನುವಾದಗಳನ್ನು ಮೂರು ಬಗೆಯಾಗಿ ವಿಂಗಡಿಸಿಕೊಳ್ಳಬಹುದು : (i) ಪ್ರಯೋಗಗಳು ; (ii) ರೂಪಾಂತರಗಳು ; ಮತ್ತು (iii) ಸೃಜನಾತ್ಮಕ ಅನುವಾದಗಳು. ಇವುಗಳನ್ನು ನಿದರ್ಶನಗಳೊಂದಿಗೆ ಪರಿಶೀಲಿಸಬಹುದು :

**ಪ್ರಯೋಗಗಳು** : ಇಂಗ್ಲಿಷ್ ಕಾವ್ಯಲೋಕದ ವೈವಿಧ್ಯಮಯ ಸಾಧನಗಳನ್ನು ಪರಿಚಯಿಸಿ ಕೊಡುವ ದೃಷ್ಟಿಯಿಂದ ಭಾಷಾಂತರಿಸಿರುವ ಹಲವು ಕವನಗಳನ್ನು ಈ ಶೀರ್ಷಿಕೆಯ ಕೆಳಗೆ ತರಬಹುದು. ಇಂಥಲ್ಲಿ ಕನ್ನಡದ ಜಾಯಮಾನವನ್ನು ಹೇಗೆ ಕಾಪಾಡಿಕೊಳ್ಳಬಹುದು, ಸಂಸ್ಕೃತ ಶಬ್ದಗಳನ್ನು ತಂದು ಗಿಡಿಯುವ ಸುಲಭ ವ್ಯಾಮೋಹಕ್ಕೆ ಬಲಿಯಾಗದೆ ಕನ್ನಡ ಪದಗಳನ್ನು ಹೇಗೆ ಜೀವಂತರೂಪದಲ್ಲಿ ಅಳವಡಿಸಿಕೊಳ್ಳಬಹುದು, ಭಾಷೆಯ ಸಾಧ್ಯತೆಗಳನ್ನು ಹೇಗೆ ಅನ್ವೇಷಿಸಬಹುದು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಉದಾಹರಣೆಗೆ, ‘When my life began’. ‘(When) ‘I am a man’, ‘When I shall grow old’ ನಂಥ ಪದಪುಂಜಗಳನ್ನು ‘ಚಿಕ್ಕಂದಿನಂದು’, ‘ಯೌವನದಲಿಂದು’, ‘ಮುಪ್ಪಿನಲಿ ಮುಂದೆ’ ಎಂದು ಸಾರ್ಥಕವಾಗಿ ಅಳವಡಿಸುತ್ತಾರೆ ; ಅಂತೆಯೇ, Sky, rainbow, old, child ಎಂಬಂಥ ಶಬ್ದಗಳಿಗೆ ಬದಲಾಗಿ’ ಆಕಾಶ–ಗಗನ ; ಕಾಮನ ಬಿಲ್ಲು ಇಂದ್ರಚಾಪ, ವೃದ್ಧಾಪ್ಯ, ಶಿಶು ಎಂಬಂಥ ಪರ್ಯಾಯಗಳನ್ನು ಆಶ್ರಯಿಸದೆ ‘ಮುಗಿಲು’, ‘ಮಳೆ ಬಿಲ್ಲು’, ಮುಪ್ಪು ‘ಮಗು’ ಎಂಬಂಥ ಸಂವಾದಿ ಶಬ್ದಗಳನ್ನು ಬಳಸಿ ಅನುವಾದದಲ್ಲಿ ಹೇಗೆ ಜೀವಂತಿಕೆಯನ್ನೂ ಲವಲವಿಕೆಯನ್ನೂ ಮೈಗೂಡಿಸಿಕೊಳ್ಳಬಹುದೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಉದಾಹರಣೆಗೆ, ವರ್ಡ್ಸ್‌ವರ್ತನ ‘Rainbow’ ಕವನದ

> “My heart leaps up when I behold
> A rainbow in the sky ;”

ಎಂಬ ಪಂಕ್ತಿಗಳನ್ನು ಓದಿದಾಗ ನಮಗೆ ದೊರೆಯುವ ಅನುಭವವೇ

> “ಮುಗಿಲಿನಲಿ ಮಳೆಬಿಲ್ಲ ಕಾಣುತಲೆ ನಾನು
> ನೆಗೆದು ಕುಣಿದಾಡುವುದು ಹೃದಯ ತಾನು !”

ಎಂಬ ಪಂಕ್ತಿಗಳನ್ನು ಓದಿದಾಗಲೂ ಮರುಕಳಿಸುತ್ತದೆ. ಅಂತೆಯೇ ನ್ಯಾಷ್

ಕವಿಯ 'Spring' ಎಂಬ ಕವನದ ಅನುವಾದವೂ :

ವಸಂತ ಬಂದ, ಋತುಗಳ ರಾಜ ತಾ ಬಂದ,
ಚಿಗುರನು ತಂದ, ಹೆಣ್ಣಳ ಕುಣಿಸುತ ನಿಂದ
ಚಳಿಯನು ಕೊಂದ, ಹಕ್ಕಿಗಳುಲಗಳೆ ಚಂದ,
ಕೂವೂ, ಜಗ್ ಜಗ್, ಪುವ್ವೀ, ಟೂವಿಟ್ಟವೂ !

**ರೂಪಾಂತರಗಳು** : ಭಾರತೀಯ ಪರಿಸರಕ್ಕೆ ಹೊಂದುವಂತೆ ಇಂಗ್ಲಿಷ್ ಗೀತೆಗಳನ್ನು, ಅಳವಡಿಸಿಕೊಳ್ಳುವುದರಲ್ಲಿಯೂ ಶ್ರೀಯವರು ತುಂಬ ಯಶಸ್ವಿಯಾಗಿದ್ದಾರೆ. ಸ್ವತಃ ಕನ್ನಡದಲ್ಲಿ ಮೂಡಿ ಬಂದ ರಚನೆಗಳೋ ಎಂಬಂತೆ ಅವುಗಳನ್ನು ರೂಪಾಂತರಿಸಿದ್ದಾರೆ. 'ಪದುಮ', 'ಅಳಿನಿ', 'ಮುದಿಯ ರಾಮಗೌಡ' ಮೊದಲಾದುವನ್ನು ಇಲ್ಲಿ ಹೆಸರಿಸಬಹುದು. 'ಕನಕಾಂಗಿ' ಎಂಬ ಪದ್ಯದಲ್ಲಿ ಕೋಲ್‌ರಿಜ್‌ನ 'Love' ಎಂಬ ಗೀತೆ ರೂಪಾಂತರಗೊಂಡಿದೆ ಎಂಬುದನ್ನು ಇಲ್ಲಿ ನೋಡಬಹುದು. ಅನುವಾದ ಇಷ್ಟು ಸೊಗಸಾಗಿ ಇರಬಹುದೆ ಎಂದು ಬೆರಗಾದರೂ ಆಶ್ಚರ್ಯವಿಲ್ಲ.

ಮೂಲದ ಒಂದು ಪದ್ಯ ಹೀಗಿದೆ :

"All thoughts, all passions, all delights,
Whatever stirs this mortal frame
All are but ministers of love
And feed his sacred flame."

ಈ ಪಂಕ್ತಿಗಳು ಶ್ರೀಯವರಲ್ಲಿ ಮರುಹುಟ್ಟು ಪಡೆದಿರುವುದು ಹೀಗೆ :

"ಭಾವಗಳು, ರಾಗಗಳು, ಬಗೆ ಬಗೆಯ ಭೋಗಗಳು
ಅದಾವಲೆಯುವುದು ಮನುಜನೆದೆಯ
ಕಾಮರಾಯಂಗೆಲ್ಲ ಕುಲಪುರೋಹಿತರಾಗಿ
ಹೋಮಾಗ್ನಿಯನು ಬೀಸಿ ಕೆರಳಿಸುವುವು."

**ಸೃಜನಾತ್ಮಕ ಅನುವಾದಗಳು** : ಮೂಲ ಕವಿಯೇ ನಮ್ಮ ಭಾಷೆಯಲ್ಲಿ ತನ್ನ ಕವನವನ್ನು ಸೃಷ್ಟಿಸಿದ್ದರೆ ಹೇಗೆ ಇರಬಹುದಾಗಿತ್ತೋ ಹಾಗೆ ಇದೆ ಎಂಬಂಥ ಅನುವಾದಗಳನ್ನು ಸೃಜನಾತ್ಮಕ ಅನುವಾದಗಳು ಎನ್ನುತ್ತೇವೆ. 'ದುಃಖಸೇತು', 'ವೀರಗಲ್ಲು', 'ಮುದ್ದಿನ ಕುರಿಮರಿ', 'ರಾವುತರ ದಾಳಿ', 'ಕಾರಿ ಹೆಗ್ಗಡೆಯ ಮಗಳು', 'ಮಾದ, ಮಾದಿ'–ಇವೇ ಮೊದಲಾದವು ಇಂಥ ಉದಾಹರಣೆಗಳು. ಶ್ರೀಯವರ ಮಾಂತ್ರಿಕ ಸ್ಪರ್ಶದಿಂದಾಗಿ ಇಂಗ್ಲಿಷ್ ಸಾಹಿತ್ಯ

ವಲ್ಲಿ 'ಸಾಮಾನ್ಯ' ವೆನಿಸಿಕೊಂಡಂಥ ಕೆಲವೊಂದು ರಚನೆಗಳೂ ಕನ್ನಡದಲ್ಲಿ 'ಅದ್ಭುತ'ವೆನಿಸುವಂತೆ ಮೈದಳೆದಿರುವುದುಂಟು. ಉದಾಹರಣೆಗಾಗಿ ನ್ಯೂಮನ್ನನ 'Lead Kindly Light' ಎಂಬ ಗೀತೆಯ ಕೆಲವು ಪಂಕ್ತಿಗಳನ್ನು ನೋಡಬಹುದು.

"Lead Kindly Light, a mid the
encircling gloom
Lead though me on !
The night is dark, and I am far from home-
Lead thou me on !
Keep thou my feet ; I do not ask to see
That distant secne,-one step enough for me."

ಇದು ಕನ್ನಡದಲ್ಲಿ ಮೈದಳೆಯುವುದು ಹೀಗೆ :

"ಕರುಣಾಳು, ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈಹಿಡಿದು ನಡೆಸೆನ್ನನು.
ಇರುಳುಕತ್ತಲೆಯ ಗವಿ ; ಮನೆ ದೂರ ; ಕನಿಕರಿಸಿ,
ಕೈಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು ; ಬಲುದೂರ ನೋಟವನು
ಕೇಳೆನೊಡನೆಯೆ—ಸಾಕು ನನಗೊಂದು ಹೆಜ್ಜೆ."

ಮೂಲದ ಭಕ್ತಿಭಾವ, ಗಾಂಭೀರ್ಯ, ಧ್ವನಿ, ಲಯ ಮೊದಲಾದುವೆಲ್ಲ ಆತ್ಮೀಯ ರೂಪದಲ್ಲಿ ಇಲ್ಲಿ ಮೈದಳೆದು ಬಿಟ್ಟಿವೆ. ಅನುವಾದವೆಂದು ಶ್ರೀಯವರೆ ಹೇಳಿರುವುದರಿಂದ, ಇವು ಅನುವಾದಗಳೆಂದು ನಾವು ನಂಬುವಂತಾಗುತ್ತದೆ. ಹಾಗಲ್ಲದೆ, ಸ್ವತಂತ್ರ ರಚನೆ ಎಂದಿದ್ದರೆ, ಪ್ರಶ್ನಿಸುವುದೂ ಸಾಧ್ಯವಾಗದೆ ಹೋಗುವಷ್ಟು ಸಹಜವಾಗಿವೆ ಶ್ರೀಯವರ ಇಂಥ ಪುನಃಸೃಷ್ಟಿಗಳು.

## ಅಶ್ವತ್ಥಾಮನ್

'ಅಶ್ವತ್ಥಾಮನ್' ರೂಪಾಂತರ ವಿಧಾನದ ಅತ್ಯುತ್ತಮ ನಿದರ್ಶನವಾಗಿರುವುದು ಮಾತ್ರವಲ್ಲದೆ, ಕನ್ನಡ ನಾಟಕಗಳ ಕ್ಷೇತ್ರದಲ್ಲಿ ಕ್ರಾಂತಿಯನ್ನುಂಟು ಮಾಡಿದ ಹಾಗೂ ಆಳವಾದ ಪ್ರಭಾವವನ್ನು ಬೀರಿದ ನಾಟಕವೂ ಆಗಿದೆ. ಗ್ರೀಕ್ ನಾಟಕಕಾರನಾದ ಸೊಫೋಕ್ಲೀಸನ 'ಏಜಾಕ್ಸ್' (ಅಥವಾ 'ಅಯಾಸ್')

ಎಂಬ ನಾಟಕದಿಂದ ಪ್ರೇರಿತವಾಗಿರುವ ಕೃತಿ ಇದು.

ತನ್ನನ್ನು ನಿರ್ಲಕ್ಷಿಸಿ ಒಡ್ಯೆಸ್ಯುಸ್‌ಗೆ ಗೌರವವನ್ನು ತೋರಿದ್ದಕ್ಕಾಗಿ ಅಯಾಸ್ ತನ್ನ ಪಕ್ಷದವರ ವಿರುದ್ಧವಾಗಿಯೇ ತಿರುಗಿಬಿದ್ದ; ಶತ್ರುಗಳ ನಾಡಿನಲ್ಲಿ ತಮ್ಮ ಸೈನ್ಯ ಬೀಡು ಬಿಟ್ಟಿದ್ದ ಅವಧಿಯಲ್ಲಿಯೇ ತನ್ನ ಪ್ರತೀಕಾರ ಕ್ರಮಗಳನ್ನು ಕೈಗೊಂಡ–ಈ ಎರಡು ಅಂಶಗಳಲ್ಲಿ 'ಅಯಾಸ್' ನಾಟಕದ ಕಥಾನಕಕ್ಕಿಂತ 'ಅಶ್ವತ್ಥಾಮನ್' ಭಿನ್ನವಾಗಿದೆ. ಉಳಿದಂತೆ, ಅಂಕದಿಂದ ಅಂಕಕ್ಕೆ 'ಅಯಾಸ್' ನಾಟಕವನ್ನೇ ಶ್ರೀಯವರು ಯಥಾವತ್ತಾಗಿ ಅನುಸರಿಸಿದ್ದಾರೆ. ದೈವವನ್ನು ನಿರ್ಲಕ್ಷಿಸಿ ಅಶ್ವತ್ಥಾಮ ಸೆಟೆದು ನಿಲ್ಲುವುದು. ಉನ್ಮಾದವಶನಾಗಿ ಪಾಂಡವರೆಂದೇ ಭ್ರಮಿಸಿ ದ್ರೌಪದಿಯ ಮಕ್ಕಳ ಹತ್ಯೆಯಲ್ಲಿ ತೊಡಗುವುದು, ಅರಿವು ಮೂಡಿದಾಗ ಅವನಲ್ಲಿ ಜಿಗುಪ್ಸೆ ಮೂಡುವುದು, ಆತ್ಮಹತ್ಯೆ, ಶಿವಕ್ಕೆ ಅಂತಿಮ ಸಂಸ್ಕಾರಗಳನ್ನು ಮಾಡುವ ವಿಷಯದಲ್ಲಿನ ವಿವಾದ ಅಶ್ವತ್ಥಾಮನ ಹಿರಿಮೆಯನ್ನು ಗುರುತಿಸಿ ಸಂಸ್ಕಾರಗಳನ್ನೆಸಗುವುದು-ಇವೆಲ್ಲ ಬೆಳವಣಿಗೆಗಳೂ 'ಅಯಾಸ್' ನಾಟಕದ ಹಾದಿಯಲ್ಲೇ ಸಾಗುತ್ತವೆ.

ರೂಪಾಂತರ ವಿಧಾನವನ್ನು ಆಶ್ರಯಿಸಿದ್ದರಿಂದ ಶ್ರೀಯವರು ಮೂಲಕ್ಕೆ ಸಂಪೂರ್ಣವಾಗಿ ಜೋತು ಬೀಳಬೇಕಾದ ನಿರ್ಬಂಧವಿರಲಿಲ್ಲ. ಮೂಲದ ಆಶಯವನ್ನು ಗ್ರಹಿಸಿ, ಮೂಲದ ಮಾತುಗಳನ್ನು ಬಳಸಿಕೊಂಡು ಮುಂದೆ ಸಾಗುವ ಸ್ವಾತಂತ್ರ್ಯ-ಸೌಲಭ್ಯ ಶ್ರೀಯವರಿಗಿತ್ತು. ಇದನ್ನು ಅವರು ಅನುಪಮವಾದ ರೀತಿಯಲ್ಲಿ ನಿರ್ವಹಿಸಿದ್ದಾರೆ. ಒಂದೆರಡು ಉದಾಹರಣೆಗಳನ್ನು ನೋಡಬಹುದು:

(i) ಮೂಲ:

"In all else Athena, I say, have thy will; but his doom shall be none but this."

**ಅಸು:** ಮತ್ತೇನೆ ಕೇಳ್, ರುದ್ರ, ಕೊಟ್ಟಪೆನ್. ಇಂದೊಂದಿಲ್ಲಂ!
ಇಂತೆ ಸಾಯಲ್‌ವೇಟ್ಕುಂ ಆ ತಂತ್ರಿ.

(ii) ಮೂಲ:

"For a day can humble all human things, and a day can lift them up; but the wise

of heart are
loved of the gods, and the evil are
abhorred."

ಅನು : "ಒಂದು ಪಗಲ್ ಎತ್ತುವುದು, ಒಂದು ಪಗಲ್ ಉರುಳಿಸುವುದು
ಮಾನುಷಮನ್. ಮಿತಿಯುಱಿದು ನೆಗಟ್ಟ ಗೇದೇವರ್ಗಳ್
ಒಸೆದಪರ್—ಮುಳಿಸಿದಪರ್ ಮಿಕ್ಕರನ್.

(iii) ಮೂಲ : "
But if a god send harm, verily e'en the
base can elude the
worthier."

ಅನು : "ದೈವಂ ತಪ್ಪಾಗಿ ನಡೆಸುವೊಡೆ, ಕಲಿ ಎಡವುವನ್,
ಪೇಡಿ ಬರ್ದುಕುವನ್, ನಗುವನ್."

ಶ್ರೀಯವರು ಇಚ್ಛಿಸಿದ್ದರೆ, ಸೊಫೋಕ್ಲೀಸನ ಈ ನಾಟಕದ ಯಥಾವತ್ತಾದ, ಸೃಜನಾತ್ಮಕವಾದ ಅನುವಾದವನ್ನೇ ಕೊಡಬಹುದಾಗಿತ್ತು. ಆದರೆ, ಹಾಗೆ ಮಾಡದೆ, ರೂಪಾಂತರ ವಿಧಾನವನ್ನು ಆಶ್ರಯಿಸಿ, ಅಜರಾಮರವಾಗಿ ಉಳಿಯು ವಂಥ ಅಪೂರ್ವ ಕೃತಿಯೊಂದನ್ನು ಕನ್ನಡಿಗರಿಗೆ ನೀಡಿ ಕೃತಾರ್ಥರಾಗಿದ್ದಾರೆ.

## ಪಾರಸಿಕರು

ಇದು ಈಸ್ಕಿಲಸನ 'Persae' ಎಂಬ ನಾಟಕದ ಅನುವಾದ. ಸೃಜನಾತ್ಮಕ ಅನುವಾದವೊಂದನ್ನು ಅವರು ಈ ಮೂಲಕ ಕೊಟ್ಟಿದ್ದಾರೆ-'ಅಶ್ವತ್ಥಾಮನ್' ಸಂದರ್ಭದಲ್ಲಿ ಮಾಡಿದಂತೆ ರೂಪಾಂತರವನ್ನೇ ಮತ್ತೆ ಮಾಡಬಯಸದೆ ಇದ್ದು ದರಿಂದ. ಅನುವಾದ ಎಷ್ಟು ಪ್ರಭಾವಶಾಲಿಯಾಗಿರಬಹುದೆಂಬುದಕ್ಕೆ ಉದಾ ಹರಣೆಯಾಗಿ ಈ ಪ್ರಸಂಗಗಳನ್ನು ನೋಡಬಹುದು :

(i) ಮೂಲ :
"I am stunned to silence ; for such
weight of woe.
Baffles expression, making question. dumb"[2]

ಅನು : "ಸಾಕು ಸಾಕೀ ಅಳಲು—ಈ ಪರಿಚಯ ಕೇಡಿಂಗೆ
ಮಾತು ಹೊಮ್ಮದೆ ಬಿಗುತು ಮೂಗಿಯಾದೆನು ನಾನು."

(ii) ಮೂಲ :
"Never here to fore,
Died in one day so vast a number of men."

ಅನು : "ಅನಿತೊಂದು ಜನವಿದುವರೆಗೆ ಸತ್ತುದನ್ ಕಾಣನಾ ಸೂರ್ಯನ್."

ಸಂದರ್ಭಕ್ಕೆ ಅನುಗುಣವಾಗಿ ವಿಸ್ತಾರಾನುವಾದಕ್ಕೂ ಸಂಕ್ಷೇಪಾನುವಾದಕ್ಕೂ ಶ್ರೀಯುತರು ಕೈಹಚ್ಚುತ್ತಾರೆ. ಆದರೂ ಇಂಥಲ್ಲಿ ಭಾವ ತೀವ್ರತೆಯತ್ತಲೇ ಅವರ ಕಣ್ಣಿರುತ್ತದೆಂಬುವದನ್ನು ಗಮನಿಸಬಹುದು. ಉದಾಹರಣೆಗೆ, ಈ ವಿಸ್ತಾರಾನುವಾದವನ್ನು ನೋಡಿ :

ಮೂಲ : Meantime the escaping army suffered loss....'

ಅನು : ದಿನ ದಿನಕೆ ಸೋಲಿರುವುದು ಹಿಂದುಮರೆ, ಬೆಂದೆ ಜಸ್ಸಟ್ಟುವರ್
ಹಗೆವರ್ : ಮೇಲೆರಗಿ ಕುಟ್ಟುವರ್."

ಅಂತೆಯೇ ಈ ಸಂಗ್ರಹಾನುವಾದವಾದರೂ :

ಮೂಲ :
"Nay, since your lament hath drawn me upward from my place of rest,
Be not owed, but clear and briefly let your trouble be expressed
Nor prolong the tale unduly wherefore are ye sore distressed."

ಅನು : "ಅಂಜಬೇಡ, ಅಳಲಪಾಡು ಕರೆಯೆ ಬಂದೆ ಕೆಳಗಣಿನ್
ನಿಡುಹೊತ್ತು ನಿಲ್ಲಲಾರೆ : ಹೇಳಿ ಬೇಗ—ಏನಳಲ್ ?

'ಪಾರಸಿಕರು' ಸಾಹಿತ್ಯಿಕವಾಗಿ ಯಾವ ನೆಲೆ-ಬೆಲೆಗಳನ್ನು ಪಡೆಯುತ್ತದೆಂಬುದು ಸಂದೇಹಾಸ್ಪದವಾಗಬಹುದಾದರೂ ಅನುವಾದವಾಗಿ ಅದು ಉತ್ತಮ ಗುಣವುಳ್ಳ ಕೃತಿಯೇ ಆಗಿ ನಿಲ್ಲುತ್ತದೆಂಬುದರಲ್ಲಿ ಸಂದೇಹವಿಲ್ಲ.

ಪ್ರಧಾನ್ ಗುರುದತ್ತ

# 'ಶ್ರೀ'ಯವರ ಶಾಸ್ತ್ರಕೃತಿಗಳು

೧

ಆಚಾರ್ಯ 'ಶ್ರೀ'ಯವರ ಶಾಸ್ತ್ರಕೃತಿಗಳು ಮುಖ್ಯವಾಗಿಎರಡು: 'ಕನ್ನಡ ಕೈಪಿಡಿ' (ಸಂಪುಟ ೧)ಯಲ್ಲಿ ಅಂತರ್ಗತವಾಗಿರುವ 'ಕನ್ನಡ ಛಂದಸ್ಸಿನ ಚರಿತ್ರೆ' ಮತ್ತು 'ಕನ್ನಡ ಭಾಷೆಯ ಚರಿತ್ರೆ'.[1] 'ಕನ್ನಡ ಕೈಪಿಡಿ'ಯ ಮೊದಲ ಮುದ್ರಣದಲ್ಲಿ (೧೯೨೭) ಟಿ. ಶ್ರೀನಿವಾಸಾಚಾರ್ಯರು ಬರೆದ 'ಕರ್ಣಾಟಕ ಛಂದಸ್ಸು' ಎಂಬುದು ದ್ವಿತೀಯ ಭಾಗವಾಗಿ ಸೇರಿದೆ; ಎರಡನೆಯ ಮುದ್ರಣದಲ್ಲಿ 'ಶ್ರೀ' ಯವರು ಅದಕ್ಕೆ 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಪ್ರಕರಣವನ್ನು ಹೊಸದಾಗಿ ಅನುಬಂಧಿಸಿದ್ದಾರೆ. ವಾಸ್ತವವಾಗಿ 'ಶ್ರೀ'ಯವರ ಈ ಹೊಸ ಪ್ರಕರಣ, ಒಂದು ಸ್ವತಂತ್ರವಾದ,ಮೌಲಿಕವಾದ ಘಟಕವಾಗಿದೆ (ಶ್ರೀನಿವಾಸಾಚಾರ್ಯರ ಭಾಗ ಸಾಂಪ್ರದಾಯಿಕವೂ ತೀರ ಸಂಕ್ಷಿಪ್ತವೂ ಆಗಿದೆ).

'ಕನ್ನಡ ಕೈಪಿಡಿ'ಯ ಸ್ವರೂಪವನ್ನು ಅದರ ಸಂಪಾದಕ ಮಂಡಲಿಯ ಅಧ್ಯಕ್ಷರಾದ 'ಶ್ರೀ'ಯವರೇ ಹೀಗೆ ತಿಳಿಸುತ್ತಾರೆ: "ಕನ್ನಡಭಾಷೆ ಮತ್ತು ಸಾಹಿತ್ಯ—ಇವುಗಳ ವಿಷಯದಲ್ಲಿ ಇದುವರೆಗೆ ತಿಳಿವಳಿಕೆಗೆ ಬಂದಿರುವ ಮುಖ್ಯಾಂಶಗಳನ್ನು ಸಂಕ್ಷೇಪವಾಗಿ ಸೂಚಿಸಬೇಕೆಂಬುದಾಗಿಯೂ ಪ್ರೌಢವಿಚಾರಗಳಿಗಾಗಲಿ ಇನ್ನೂ ಚರ್ಚಾಸ್ಪದವಾಗಿರತಕ್ಕ ಅಂಶಗಳಿಗಾಗಲಿ ಸಾಧಾರಣವಾಗಿ ಪ್ರವೇಶ ಮಾಡಬೇಕಾದದ್ದಿಲ್ಲವೆಂಬುದಾಗಿಯೂ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ವಿದ್ಯಾರ್ಥಿ ತಿಳಿದಿರಬೇಕಾದಷ್ಟು ಅಂಶಗಳು ಇರಬೇಕೆಂಬುದಾಗಿಯೂ ಸಭೆಯವರಿಗೆ ನಿರೂಪಣೆಯಾಗಿತ್ತು." ಇತರ ಭಾಗಗಳಂತೆ 'ಶ್ರೀ'ಯವರು ಬರೆದ ಭಾಗಗಳೂ ಈ ಸೂಚನೆಯನ್ನು ಅನುಸರಿಸಿವೆ; ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಷಯವನ್ನು ಸಂಗ್ರಹವಾಗಿ, ಸರಳವಾಗಿ ತಿಳಿಸಿವೆ. ಆದರೆ ವಿಚಾರಗಳಲ್ಲಿ ಸಾಕಷ್ಟು ಪ್ರೌಢತೆಯೂ ಇದ್ದು, ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಎಲ್ಲರಿಗೂ ಅವು ಪ್ರಯೋಜನಕಾರಿಯಾಗಿವೆ.

'ಶ್ರೀ'ಯವರ 'ಕನ್ನಡ ಛಂದಸ್ಸಿನ ಚರಿತ್ರೆ', ಕನ್ನಡ ಛಂದಸ್ಸಿನ ಅಧ್ಯಯನದ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟ. ಮೊದಲ ಬಾರಿಗೆ ಅವರು ಕನ್ನಡ

---

[1] ಇಂಗ್ಲಿಷಿನಲ್ಲಿ 'ಶ್ರೀ'ಯವರು 'A Handbook of Rhetoric' ಎಂಬ ಪುಟ್ಟ ಪುಸ್ತಕವೊಂದನ್ನು ಬರೆದಿದ್ದಾರೆ. ಆದರೆ ಅದರಲ್ಲಿ ಅವರ ಸ್ವಂತಿಕೆ ಹೆಚ್ಚೇನೂ ಇದ್ದಂತಿಲ್ಲ. ಇಲ್ಲಿ ಅದನ್ನು ಗಮನಿಸಿಲ್ಲ.

ಛಂದಸ್ಸಿನ—ದೇಶ್ಯ ಛಂದಸ್ಸಿನ—ಮೂಲತತ್ತ್ವಗಳನ್ನು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ; ತಮಿಳು ಛಂದಸ್ಸಿನ ನೆರವಿನಿಂದ ಕನ್ನಡ ಛಂದಸ್ಸಿನ ರಹಸ್ಯವನ್ನು ಭೇದಿಸಿ, ಅದರ ಸ್ವರೂಪವನ್ನು ವಿಶದೀಕರಿಸಿದ್ದಾರೆ. ಅಚ್ಚಗನ್ನಡ ಛಂದಸ್ಸು ಅಂಶಗಣಗಳಿಂದಾದುದು. ತಮಿಳಿನ 'ಅಶೈ' ಎಂಬುದನ್ನಾಧರಿಸಿ, 'ಅಂಶಗಣ' ಎಂಬ ಹೆಸರು ಕೊಟ್ಟವರೇ 'ಶ್ರೀ'ಯವರು. ಅವರದು "ಈ ೨೦ನೆಯ ಶತಮಾನದಲ್ಲಿ ಕನ್ನಡ ಛಂದಸ್ಸನ್ನು ಕುರಿತು ನಡೆಸಿದ ವಿದ್ವತ್ ಸಾಹಸಮಯ ಕಾರ್ಯವೆಂಬುದನ್ನು ಯಾರೂ ಮರೆಯುವಂತಿಲ್ಲ." ಅಷ್ಟೇ ಅಲ್ಲ, "ಕೈಪಿಡಿಯಲ್ಲಿ ಕನ್ನಡ ಛಂದಸ್ಸಿನ ಬೆಳವಣಿಗೆಯನ್ನು ತಮಿಳು ಮತ್ತು ತೆಲುಗು ಛಂದಸ್ಸುಗಳೊಡನೆ ಹೋಲಿಸಿ ಬಿ. ಎಂ. ಶ್ರೀಕಂಠಯ್ಯನವರು ಬರೆದಿರುವ ಲೇಖನ ಇತರ ಸಂಶೋಧಕರಿಗೆ ದಾರಿ ತೋರಿಸಿತು." 'ಶ್ರೀ'ಯವರಿಗಿದ್ದ ತಮಿಳಿನ ಗಾಢ ಪರಿಜ್ಞಾನ ಅವರ ಕಾರ್ಯದಲ್ಲಿ ತುಂಬ ಸಹಾಯಕ್ಕೆ ಬಂತು; ಕನ್ನಡಿಗರಿಗೆ ಉಪಕಾರಕವಾಯಿತು.

'ಸಂಸ್ಕೃತದಿಂದ ತೆಗೆದುಕೊಂಡ ಛಂದಸ್ಸು' ಮತ್ತು 'ದ್ರಾವಿಡ ಭಾಷೆಗಳಿಗೆ ಸಹಜವಾದ ಛಂದಸ್ಸು'—ಎರಡನ್ನೂ 'ಶ್ರೀ'ಯವರು ವಿವೇಚಿಸಿದ್ದಾರೆ; ಎರಡನೆಯದಕ್ಕೆ ಇಲ್ಲಿ ಪ್ರಾಧಾನ್ಯ. ಮೊದಲು ಅವರು ಸಂಸ್ಕೃತದ ವೈದಿಕ ಛಂದಸ್ಸನ್ನು ತೆಗೆದುಕೊಂಡು, ಗಾಯತ್ರಿ, ಅನುಷ್ಟುಭ್, ಶ್ಲೋಕ, ತ್ರಿಷ್ಟುಭ್, ಜಗತಿ, ಪ್ರಗಾಥಗಳ ಲಕ್ಷಣ, ಲಕ್ಷ್ಯಗಳನ್ನು ಹೇಳಿದ್ದಾರೆ. ಶ್ಲೋಕವನ್ನು ಕುರಿತು "ಒಂದು ವೇಳೆ ಅನುಷ್ಟುಪ್ಪನ್ನು ಪ್ರಯೋಗಿಸಿ ನೋಡಿ ಕನ್ನಡ ಭಾಷೆಗೆ ಹೊಂದುವುದಿಲ್ಲವೆಂದು ಬಿಟ್ಟಿರಬಹುದು" ಎಂದಿದ್ದಾರೆ. "ಈ ವೈದಿಕ ವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ ಬಿಟ್ಟುಹೋದುವು. ಕನ್ನಡ ಕವಿಗಳಿಗೂ ಕಣ್ಮರೆಯಾದುವು. ಶ್ಲೋಕವೊಂದು ಸ್ವಲ್ಪ ಆಸೆದೋರಿಸಿ ದಕ್ಕದೆಹೋದ ಹಾಗೆ ಕಾಣುತ್ತದೆ. ಮುಂದೆ ಬರುವ ಕವಿಗಳಾದರೂ ಜೀವಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೆ?" ಎಂಬ 'ಶ್ರೀ'ಯವರ ಮಾತುಗಳು ತುಂಬ ಗಮನಾರ್ಹವಾಗಿವೆ. ವೈದಿಕ ಛಂದಸ್ಸುಗಳು ಲೌಕಿಕ ಛಂದಸ್ಸುಗಳಿಗೆ ಮೂಲವೆಂದೂ ಅವುಗಳಲ್ಲಿ ಗಣನಾರ್ಹವಾದ ತೇಜಸ್ಸು ಗಾಂಭೀರ್ಯ ಸೌಂದರ್ಯಗಳು ಕಾಣಬರುತ್ತವೆಂದೂ ಅವರ ಹೇಳಿಕೆ.

ಅನಂತರ ಲೌಕಿಕ ಛಂದಸ್ಸನ್ನು–ವೃತ್ತಗಳನ್ನು–ಎತ್ತಿಕೊಂಡು ವಿಚಾರ ಮಾಡುತ್ತಾರೆ 'ಶ್ರೀ'. "ಉತ್ಪಲ, ಶಾರ್ದೂಲ, ಸ್ರಗ್ಧರೆ—ಇವುಗಳ ಮೊದಲಿನ ಗುರುವಿಗೆ ಎರಡು ಲಘುಗಳನ್ನು ಇಟ್ಟು, ಚಂಪಕ, ಮತ್ತೇಭ, ಮಹಾಸ್ರಗ್ಧರೆ

ಗಳನ್ನು ಕನ್ನಡ ಕವಿಗಳು ಮಾಡಿಕೊಂಡಂತೆ ಕಾಣುವುದು" ಎಂಬ ಅವರ ಊಹೆ ಸರಿಯಾಗಿದೆ. "ವೃತ್ತಗಳನ್ನು ಕನ್ನಡಕ್ಕೆ ತೆಗೆದುಕೊಳ್ಳುವುದರಲ್ಲಿ ಪ್ರಾಸ ಸೇರಿತು; ಯತಿ ಮಾರಿತು; ಪಾದಗಳ ಕೊನೆಗಳಲ್ಲಿ ನಿಲವು ಸಾಧಾರಣವಾಗಿ ಇಲ್ಲ; ಅಲ್ಲಿ ದೀರ್ಘವಾಗಬಹುದಾದ ಹ್ರಸ್ವ ಬರಲು ಎಡೆಯಿಲ್ಲ, ಮುಂದ ಕ್ಕೋಡುವುದರಿಂದ. ಎಲ್ಲಕ್ಕಿಂತ ಹೆಚ್ಚಾಗಿ ವೃತ್ತದ ಧಾಟಿ ಘೋಷಗಳನ್ನು ಪಾಲಿಸುವುದಕ್ಕಾಗಿ ಹೆಚ್ಚುಹೆಚ್ಚಾಗಿ ಸಂಸ್ಕೃತದ ದೀರ್ಘ ಸಮಾಸಗಳನ್ನು ಹೆಣೆಯುವಂತಾಯಿತು; ಕನ್ನಡ ನುಡಿಗಳು ತಮ್ಮ ಸ್ವರಗಳೊಡನೆ ಎದ್ದು ನಿಂತು ಕಾಣದಂತಾಯಿತು"—ಇದು ಯಥಾರ್ಥ ಚಿತ್ರ. ಅಕ್ಷರ ವೃತ್ತಗಳೆನಿಸಿ ಕೊಂಡ ಕೆಲವು ಮಾತ್ರಾವೃತ್ತಗಳಾಗಿಯೂ ಪರಿಣಮಿಸಿರುವುದನ್ನು 'ಶ್ರೀ' ಯವರು ಗಮನಿಸಿರುವುದು ಅವರ ಸೂಕ್ಷ್ಮದೃಷ್ಟಿಗೆ ಸಾಕ್ಷಿ. ಅವರ ಸಂಪ್ರ ದಾಯಶರಣವಲ್ಲದ ಆಧುನಿಕ ಮನೋಧರ್ಮಕ್ಕೆ ನಿದರ್ಶನ, ಈ ಹೇಳಿಕೆ: "ಮೂರಕ್ಷರದ ಯ ಗಣ ಮುಂತಾದ ಎಂಟು ಗಣಗಳಿಂದ ವೃತ್ತಗಳನ್ನು ವಿಭಾಗ ಮಾಡಿ ಲಕ್ಷಣ ಹೇಳುವುದು ಅಷ್ಟು ಸಹಜವಾಗಿ ಕಾಣುವುದಿಲ್ಲ. ವೃತ್ತಗಳ ನಿಜಸ್ವರೂಪವಾಗಲಿ ರಚನೆಯ ರಹಸ್ಯವಾಗಲಿ ಈ ಪದ್ಧತಿಯಿಂದ ತಿಳಿಯು ವುದಿಲ್ಲ. ಅಕ್ಷರ ಗಣ ಲಕ್ಷಣಗಳನ್ನು ಕಂಠಪಾಠ ಮಾಡುವುದಕ್ಕಿಂತಲೂ ಪ್ರಸಿದ್ಧ ಕವಿಗಳ ಒಂದೊಂದು ಪಾದವನ್ನು ನೆನಪಿನಲ್ಲಿಟ್ಟುಕೊಳ್ಳುವುದು ಒಳ್ಳೆಯದು."

ಲೌಕಿಕ ಛಂದಸ್ಸಾದ ಕಂದವನ್ನು 'ಶ್ರೀ'ಯವರು ಸೋದಾಹರಣವಾಗಿ ಚರ್ಚಿಸಿ, "ಈ ಮಾತ್ರಾಗಣಗಳ ಧಾಟಿ ಕನ್ನಡಕ್ಕೆ ಹೊಂದಿಕೊಂಡಿದ್ದರಿಂದ ಕಂದ ಹಳಗನ್ನಡಕ್ಕೆ ಸೊಗಸಾಯಿತು" ಎನ್ನುತ್ತಾರೆ. ವೃತ್ತ ಕಂದಗಳ ಮೇಲೆ ಭಾಷಾಪರಿಣಾಮದ ವ್ಯತ್ಯಾಸದ ಪರಿಣಾಮವನ್ನು ಕುರಿತು ಅವರು ಆಲೋಚಿ ಸಿರುವುದು ಗಮನಾರ್ಹ.

ಕನ್ನಡ ಛಂದಸ್ಸಿನ ನಿರೂಪಣೆಗೆ 'ಶ್ರೀ'ಯವರು ಹೀಗೆ ಪೀಠಿಕೆ ಹಾಕಿಕೊಳ್ಳು ತ್ತಾರೆ: "ಒನಕೆವಾಡು ಮುಂತಾದುವುಗಳಲ್ಲಿ ಜನಸಾಮಾನ್ಯರೂ ಹೆಂಗಸರೂ ತ್ರಿಪದಿ ಮುಂತಾದ ಕನ್ನಡ ಛಂದಸ್ಸನ್ನೇ ಬಳಸುತ್ತಿದ್ದರು. ಈ ಹರೆ ಬಡಿದು ರಾಗಿ ಬೀಸಿ, ಒನಕೆ ಕುಟ್ಟಿ, ಬೀದಿಯಲ್ಲಿ ಕುಣಿದು, ಹಾಡಿದ ಕನ್ನಡ ಮಟ್ಟು ಗಳನ್ನು, ಹಾಡುಗಳನ್ನು ಈಗ ವಿಚಾರಕ್ಕೆ ತೆಗೆದುಕೊಳ್ಳೋಣ. ಈ ಜನಪದ ಸಾಹಿತ್ಯ ಮತ್ತೆ ಕನ್ನಡದ ಪ್ರೌಢ ಸಾಹಿತ್ಯಕ್ಕೂ ಹೇಗೆ ತಳಹದಿಯಾಯಿ ತೆಂಬುದನ್ನು ನೋಡೋಣ."

ನಾಗವರ್ಮನ 'ಛಂದೋಂಬುಧಿ'ಯನ್ನು 'ಶ್ರೀ'ಯವರು ಚುಟುಕಾಗಿ ಪರಿಚಯಿಸಿ, ಕನ್ನಡ ಛಂದಸ್ಸನ್ನೂ ಅದರ ದ್ರಾವಿಡ ಮೂಲವನ್ನೂ ಕುರಿತು ತೌಲನಿಕ ದೃಷ್ಟಿಯಿಂದ ಹೀಗೆ ಹೇಳುತ್ತಾರೆ: "ಈ ಕನ್ನಡ ಛಂದಸ್ಸೇ ನಿಜವಾದ ಕನ್ನಡ ಭಾಷೆಯ, ಕನ್ನಡ ಜನರ ಛಂದಸ್ಸೆಂದೂ, ಇದು ಜನರಲ್ಲಿ (ಪ್ರಾಯಶಃ ಉಳಿಯದೆ ಹೋದ ಜನಪದ ಸಾಹಿತ್ಯದಲ್ಲಿ) ಪ್ರಚಾರದಲ್ಲಿತ್ತೆಂದೂ ತೆಲುಗು, ತಮಿಳುಗಳೊಡನೆ ಹೋಲಿಸಿ ನೋಡಿದರೆ ಇದೇ ಮುಂದೆ ವೀರಶೈವ ಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ 'ತಾಯಿ' ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು. ಅದರಲ್ಲಿಯೂ ತಮಿಳಿನ ಛಂದಸ್ಸುಗಳೊಡನೆ ಹೋಲಿಸಿ ನೋಡಬೇಕು: ಏಕೆಂದರೆ ತೆಲುಗೂ ಕನ್ನಡದಂತೆ ಸಂಸ್ಕೃತ ಛಂದಸ್ಸನ್ನೇ ಶರಣುಹೊಕ್ಕು ತನ್ನ 'ಸ್ವದೇಶಿ'ಯನ್ನು ಓಂದಕ್ಕೆ ಹಾಕಿತು. ತಮಿಳು ಸ್ವದೇಶಿ ಭಾವನೆಯನ್ನೂ ಸ್ವತಂತ್ರದ ಬೆಳವಣಿಗೆಯನ್ನೂ ಬಿಡದೆ, ಗೌರವ ಕೊಟ್ಟು, ಪ್ರತಿಜ್ಞೆಮಾಡಿಯೋ ಎಂಬಂತೆ ಸಾಧಿಸಿ ನಿಲ್ಲಿಸಿಕೊಂಡಿತು. ಆದರೆ ಸೂಕ್ಷ್ಮವಾಗಿ ಪರಿಶೀಲಿಸತಕ್ಕವರಿಗೆ ಈ ಮೂರು ಭಾಷೆಗಳಲ್ಲಿಯೂ ಸಂಸ್ಕೃತ ಭಿನ್ನವಾದ, ದ್ರಾವಿಡ ಭಾಷೆಯಂತೆಯೇ ಸಹಜವಾದ ಒಂದು ದ್ರಾವಿಡ ಛಂದಸ್ಸಿನ ಮೂಲಾಧಾರಗಳು ದೊರೆಯುತ್ತವೆ. ಮಲೆಯಾಳದಲ್ಲಿಯೂ ಕೊಡಗು ತುಳು ಮುಂತಾದ ಸಾಹಿತ್ಯಕ್ಕೇರದ ಭಾಷೆಗಳ ಹಾಡುಗಳಲ್ಲಿಯೂ ದ್ರಾವಿಡ ದೇಶಗಳ ಎಲ್ಲ ಜನಪದ ಸಾಹಿತ್ಯಗಳಲ್ಲಿಯೂ ಹೆಂಗಸರ ಹಾಡುಗಳಲ್ಲಿಯೂ ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು. ಈ ದೃಷ್ಟಿ ಹುಟ್ಟಿದ ಮೇಲೆ ಈ ಬಗೆಯ ಸಾಹಿತ್ಯಗಳ ಸಂಗ್ರಹಕಾರ್ಯವೂ ಈ ದ್ರಾವಿಡ ಛಂದಸ್ಸಿನ ಸ್ವರೂಪ ನಿರ್ಣಯ ಕಾರ್ಯವೂ ಪ್ರಾರಂಭವಾಗಿವೆ."

ನಾಗವರ್ಮನಲ್ಲಿ ಉಕ್ತವಾದ ಕನ್ನಡ ಛಂದೋರೂಪಗಳೆಂದರೆ, ತ್ರಿಪದಿ, ಅಕ್ಕರ, ರಗಳೆ ಮತ್ತು ಷಟ್ಪದಿ. ಮುಂದೆ ಈ ಪಟ್ಟಿಗೆ ಸಾಂಗತ್ಯ ಸೇರುತ್ತದೆ. ೧೨ನೆಯ ಶತಮಾನದಿಂದೀಚೆಗೆ ಷಟ್ಪದಿ ಆರು ಕವಲಾಯಿತು. "ರಗಳೆ ಸಂಸ್ಕೃತಕ್ಕೆ (ಪ್ರಾಕೃತಕ್ಕೆ) ಸೇರಬೇಕೋ ಅಂಶಗಣದ ಕರ್ನಾಟಕ ವಿಷಯ ಜಾತಿಯೋ ಸಂಶಯ ಉಳಿಯುತ್ತದೆ" ಎನ್ನುತ್ತಾರೆ 'ಶ್ರೀ'ಯವರು. ರಗಳೆ ಪ್ರಾಕೃತದಿಂದ ಬಂದದ್ದು ಎಂಬುದೀಗ ಖಚಿತವಾಗಿರುವುದರಿಂದ, ಅದನ್ನು ಈ ಪಟ್ಟಿಯಿಂದ ತೆಗೆಯಬೇಕು.

ಮುಂದೆ, ಕನ್ನಡ ಪದ್ಯಗಳನ್ನು ರೂಪಿಸಿರುವ ದ್ರಾವಿಡ ಗಣಗಳ ಸ್ವರೂಪ

ವನ್ನು ವಿವರಿಸುತ್ತಾರೆ 'ಶ್ರೀ' ಯವರು. ನಾಗವರ್ಮ ಈ ಗಣಗಳನ್ನು ಬ್ರಹ್ಮ ಗಣ, ವಿಷ್ಣುಗಣ, ರುದ್ರಗಣಗಳೆಂದು ಹೆಸರಿಸಿದ್ದಾನೆ. ಬ್ರಹ್ಮಗಣ ನಾಲ್ಕು ಬಗೆ; ವಿಷ್ಣುಗಣ ಎಂಟು ಬಗೆ; ರುದ್ರಗಣ ಹದಿನಾರು ಬಗೆ. ತೆಲುಗಿನಲ್ಲಿ ಇವಕ್ಕೆ ಕ್ರಮವಾಗಿ ಸೂರ್ಯ, ಇಂದ್ರ, ಚಂದ್ರ ಗಣಗಳೆಂದು ಹೆಸರು. ತಮಿಳಿನಲ್ಲಿ ಇವನ್ನು ಈರಶ್ಶೈಶೀರ್, ಮೂವಶ್ಶೈಶೀರ್, ನಾಲಶ್ಶೈಶೀರ್ ಎಂದು ಕರೆಯುತ್ತಾರೆ.

"ತಮಿಳಿನ ಕ್ರಮವನ್ನು ಅನುಸರಿಸಿ ಹೀಗೆ ಹೇಳಬಹುದು. ಗಣದಲ್ಲಿ ಅಂಶ ಗಳುಂಟು. ಗಣಕ್ಕೆ ಮೂಲಾಂಶ ಒಂದು ಗುರು (ಲಘುವಲ್ಲ). ಇದೇ ಗಣವಾಗ ಲಾರದು. ಆದರೆ ಪಾದಾಂತದಲ್ಲಿ ಗಣ ಸ್ಥಾನದಲ್ಲಿ ನಿಲ್ಲಬಹುದು."

"ಮೊದಲಿನ ಮೂಲಾಂಶವಾದ ಗುರುವಿಗೆ, ಒಂದು, ಎರಡು, ಮೂರು ಗುರುಗಳನ್ನು ಎಂದರೆ ಅಂಶಗಳನ್ನು ಸೇರಿಸಿದರೆ ಮೂರು ಬಗೆಯ ಗಣಗಳು ಹುಟ್ಟುವುವು: ಯಾವುವೆಂದರೆ ಎರಡಂಶದ ಗಣ: ಬ್ರಹ್ಮ, ಸೂರ್ಯ; ಮೂರಂಶದ ಗಣ: ವಿಷ್ಣು, ಇಂದ್ರ; ನಾಲ್ಕಂಶದ ಗಣ: ರುದ್ರ, ಚಂದ್ರ."

"ಮೊದಲನೆಯ ಅಂಶಕ್ಕೆ **ಮಾತ್ರ**, ಎಂದರೆ ಗುರುವಿಗೆ ಬದಲಾಗಿ, ಎರಡು ಲಘುವನ್ನು ಹಾಕಬಹುದು. ಎರಡನೆಯ, ಮೂರನೆಯ, ನಾಲ್ಕನೆಯ ಅಂಶ ಗಳು ಲಘುವಾಗಿಯೂ ಇರಬಹುದು...."

ಅಂಶಗಣಗಳು ಕಾಲಕ್ರಮದಲ್ಲಿ ಮಾತ್ರಾಗಣಗಳಾಗಿ ಪರಿವರ್ತಿತವಾದುದು ಹೇಗೆಂಬುವರ ಮೇಲೆ 'ಶ್ರೀ'ಯವರು ಉಪಯುಕ್ತವಾಗಿ ಬೆಳಕು ಚೆಲ್ಲುತ್ತಾರೆ: "ಮೂಲಾಂಶದ ಮೇಲೇರಿದ ಅಂಶಗಳಿಗೆ ಬದಲಾಗಿ ಎರಡು ಲಘುಗಳ ಪ್ರಯೋಗ ಇಲ್ಲ. ಅಂಶಗಣಗಳು ಸ್ವಚ್ಛವಾಗಿ ಹಾಗೇ ಇರುವವರೆಗೂ ಈ ನಿಯಮವಿತ್ತು. ಆದರೆ ಕ್ರಮೇಣ, ಮೊದಲನೆಯ ಸ್ಥಾನದಂತೆ, ಮಿಕ್ಕ ಸ್ಥಾನಗಳಲ್ಲಿಯೂ ಈ ಬದಲಾವಣೆ ಹಬ್ಬಿಕೊಂಡು ಅಂಶಗಣವಾಗಿದ್ದದ್ದು ಮಾತ್ರಾಗಣವಾಗಿ ಪರಿಣ ಮಿಸಿತು. ಆಗ ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ ೩, ೪, ೫ ಮಾತ್ರೆಗಳುಳ್ಳ ಮೂರು ಗಣ ಗಳು ಉಳಿದುವು: ಇವಕ್ಕೆ ಉತ್ಸಾಹಗಣ, ಮಂದಾನಿಲ ಗಣ, ಲಲಿತ ಗಣ ಎಂದು ಆಯಾ ರಗಳೆಗಳ ಮೇಲೆ ಹೆಸರು ಕಟ್ಟಬಹುದು. ಇವು ಬ್ರಹ್ಮ, ವಿಷ್ಣು ಗಳ ಪ್ರತಿಯಾಗಿ ನಿಂತುವು. ರುದ್ರಗಣ ಬ್ರಹ್ಮ+ವಿಷ್ಣುವಾಗಿ (೩+೪) ಒಡೆದು ನಿಜಸ್ವರೂಪದಲ್ಲಿ ಕಣ್ಮರೆಯಾಯಿತು; ಪಾದಗಳ ಕೊನೆಯಲ್ಲಿ ವಿಷ್ಣು+ಗುರು ಆಯಿತು...."

ತಮ್ಮ ವಿಚಾರ ಸರಣಿಯನ್ನು 'ಶ್ರೀ'ಯವರು ಹೀಗೆ ಕ್ರೋಡೀಕರಿಸುತ್ತಾರೆ:

ಮೊದಲನೆಯ ಅಂಶ ಒಂದು ಗುರು ಅಥವಾ ಎರಡು ಲಘುವಾಗಿರಬಹುದು, ಮಿಕ್ಕ ಅಂಶಗಳು ಒಂದು ಗುರು ಅಥವಾ ಒಂದು ಲಘುವಾಗಿರಬೇಕು ಎಂಬ ತತ್ತ್ವವನ್ನೂ, ಅಂಶಗಣಗಳು ಕಾಲಕ್ರಮದಲ್ಲಿ ಮಾತ್ರಾ ಗಣಗಳಾದುವೆಂಬುದನ್ನೂ ಮೊದಲ ಅಂಶಕ್ಕೆ ಮಾತ್ರ ಎರಡು ಲಘುವಿನ ಸಮಾನತೆ ಇದ್ದದ್ದು ಸರ್ವತ್ರ ಹರಡಿ ಈ ಬದಲಾವಣೆಗೆ ಅವಕಾಶ ಕೊಟ್ಟಿರಬಹುದೆಂಬುದನ್ನೂ ಗಮನದಲ್ಲಿಟ್ಟರೆ ಸಾಕು".

ಆಮೇಲೆ 'ಶ್ರೀ'ಯವರು ತ್ರಿಪದಿ, ಅಕ್ಕರ, ಸಾಂಗತ್ಯ, ರಗಳೆ, ಷಟ್ಪದಿಗಳ ಲಕ್ಷಣ, ವೈವಿಧ್ಯ, ಬೆಳವಣಿಗೆಗಳನ್ನು ಕಾವ್ಯ, ಶಾಸನಗಳಿಂದೆತ್ತಿಕೊಂಡ ಉದಾಹರಣೆಗಳ ಸಹಿತ ವಿಸ್ತಾರವಾಗಿ ವಿವೇಚಿಸುತ್ತಾರೆ; ಅಲ್ಲಲ್ಲಿ ವಿಚಾರಯೋಗ್ಯವಾದ ವಿಶೇಷಾಂಶಗಳನ್ನು ಪ್ರಸ್ತಾಪಿಸುತ್ತಾರೆ. "ತ್ರಿಪದಿಯ ರಚನೆಯನ್ನು ನೋಡಿದರೆ ಇದು ಮೊದಲು ಎರಡು ಸಾಲಿನ ಹಾಡಾಗಿದ್ದು, ಈಗಿನ ಎರಡನೆಯ ಸಾಲಿನ ೩ ನೆಯ ಗಣದಿಂದ ಕೊನೆಗಂಡು ಆಮೇಲೆ ಮತ್ತೊಂದು ಮೂರಂಶದ ಗಣ ಸೇರಿ, ಎರಡನೆಯ ಪೂರ್ವದ ಪಾದ ಮತ್ತೊಮ್ಮೆ ಮಗುಚಿ ಬಂದು, ಮೂರು ಸಾಲಾಯಿತೆಂದು ಊಹಿಸಬಹುದಾಗಿದೆ", "ಗೀತಿಕೆಯ ಎರಡು ಪಾದಗಳ ಅಥವಾ ಕಿರಿಯಕ್ಕರದ ಎರಡು ಪಾದಗಳ ರೂಪಾಂತರವೇ ಸಾಂಗತ್ಯವಾಗಿ ತೋರುವುದು" ಮುಂತಾದ ಹೇಳಿಕೆಗಳನ್ನು ಲಕ್ಷಿಸಬಹುದು. ಶಿಶುಮಾಯಣನ ಕಾವ್ಯವೇ ಮೊದಲ ಸಾಂಗತ್ಯ ಕೃತಿಯೆಂದು 'ಶ್ರೀ' ಗ್ರಹಿಸಿದ್ದಾರೆ. ಆದರೆ ದೇಪರಾಜನ 'ಸೊಬಗಿನ ಸೋನೆ' ಪ್ರಾಚೀನತಮ ಸಾಂಗತ್ಯ ರಚನೆಯೆಂಬುದು ಈಚಿನ ತೀರ್ಮಾನ. ಯಕ್ಷಗಾನ, ದ್ವಿಪದಿ, ಸೀಸಪದ್ಯ, ತ್ರಿಪುಡೆ, ಗೋವಿನ ಕಥೆಯ ಮಟ್ಟು ಮುಂತಾದ ರೂಪಗಳನ್ನೂ 'ಶ್ರೀ'ಯವರು ಲಕ್ಷ್ಯಸಹಿತ ಉಲ್ಲೇಖಿಸಿದ್ದಾರೆ.

ಉಪಸಂಹಾರರೂಪವಾಗಿ ಅವರು ತಮಿಳು ಛಂದಸ್ಸಿನ ಸ್ಥೂಲ ಚಿತ್ರವೊಂದನ್ನು ಕೊಡುತ್ತಾರೆ. "ಪುರಾತನ ತಮಿಳು ಛಂದಸ್ಸಿನಲ್ಲಿ ಕನ್ನಡ ಛಂದಸ್ಸಿನ ಹೆಜ್ಜೆ ಕಾಣಬರುವುದು" ಎಂದು ಮತ್ತೆ ಹೇಳುತ್ತಾರೆ. ಅಪ್ಪೈಗಳ ಸ್ವರೂಪವನ್ನು ಅವರು ವಿವರಿಸಿರುವುದಲ್ಲದೆ, ಕುಱಳ್‌ವೆಣ್ಪಾ, ನೇರಿಶೈವೆಣ್ಪಾ ಆಗವಲ್‌ಪಾ, ಅಶಿರಿಯವಿರುತ್ತಂ ಮುಂತಾದ ಕೆಲವು ಪ್ರಸಿದ್ಧ ತಮಿಳು ವೃತ್ತಗಳನ್ನೂ ಪರಿಚಯಿಸಿದ್ದಾರೆ. "ಈ ಉದಾಹರಣೆಗಳಿಂದ ಹಳಗನ್ನಡಕ್ಕೂ ತಮಿಳಿಗೂ ಇರುವ ಹತ್ತಿರ ಸಂಬಂಧವನ್ನೂ, ಸಂಘದ ತಮಿಳಿನ ಶುದ್ಧ ಶೈಲಿಯನ್ನೂ, ಛಂದಸ್ಸಿನ ವಿಮರ್ಶೆಯಲ್ಲಿ ಮತ್ತು ವೃದ್ಧಿಯಲ್ಲಿ ತಮಿಳಿನ ಬೆಳಕು ಬೀಳಬೇಕೆನ್ನುವುದನ್ನೂ

"ಮುಖ್ಯವಾಗಿ ವಿದ್ಯಾರ್ಥಿಗಳು ಒಂದು, ಎರಡು, ಮೂರು ಅಂಶದ ಗಣಗಳನ್ನೂ, ಕಾಣಬಹುದು" ಎಂಬುದು 'ಶ್ರೀ'ಯವರ ಮುಕ್ತಾಯದ ಮಾತು. ತೌಲನಿಕ ಅಧ್ಯಯನದ ಮಹತ್ವವನ್ನು ಅವರು ಈ ಮೂಲಕ ಪ್ರಾಯಃ ಮೊದಲ ಬಾರಿಗೆ ಎತ್ತಿ ಹೇಳುತ್ತಿದ್ದಾರೆ.

ಆಧುನಿಕ ಛಂದಸ್ಸನ್ನು ಕುರಿತ 'ಶ್ರೀ'ಯವರ ಉಕ್ತಿಯಿದು: "೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಇಂಗ್ಲಿಷ್ ಸಾಹಿತ್ಯದ ಅನುಭವವುಳ್ಳವರು ಈ ಪೂರ್ವದ ತಳಹದಿಯ ಮೇಲೂ, ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡು ಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ, ಅವಲಂಬಿಸಿ ಹೊಸ ರೀತಿಯ ಪದ್ಯಗಳನ್ನೂ, ಪಾದಗಳ ವಿನ್ಯಾಸವನ್ನೂ, ಪ್ರಾಸದ ನಿರಾಕರಣ ಮತ್ತು ಹೊಸ ಬಗೆಯ ವಿನಿಯೋಗವನ್ನೂ, ನಾಲ್ಕು ಆರು ಪಾದಗಳನ್ನೂ ಮೀರಿ ಎಷ್ಟು ದೂರ ಬೇಕಾದರೆ ಅಷ್ಟು ದೂರ ಓಡಬಲ್ಲ ಪದ್ಯರಚನೆಯನ್ನೂ, ಸರಳ ರಗಳೆಯನ್ನೂ, ಪ್ರಯೋಗಿಸುತ್ತಾ ಇದ್ದಾರೆ." ಆದರೆ 'ಶ್ರೀ'ಯವರ ವಿವೇಚನೆ ಪ್ರಾಚೀನ ಛಂದಸ್ಸಿಗಷ್ಟೆ ಸೀಮಿತವಾಗಿದೆ.

"ಇದರಲ್ಲಿ ಸೂಚಿಸಿರುವ ಅಂಶಗಳು ವಿಚಾರದೃಷ್ಟಿಯಿಂದ ಮಾಡಿರುತ್ತವೆ. ವಿದ್ವಾಂಸರು ವಿಮರ್ಶೆ ಮಾಡಿ ಸಹಾಯ ಮಾಡಬೇಕೆಂದು ಪ್ರಾರ್ಥನೆ" ಎಂದೂ "ಕನ್ನಡ ಛಂದಸ್ಸಿನ ತಾಯಿಬೇರಿನ ಮೇಲೆ ಹೊಸ ಸೌಂದರ್ಯವನ್ನು ಕಸಿಮಾಡಿ ಕಟ್ಟಿ ಬೆಳೆಸುವವರು ಈ ವಿಮರ್ಶೆಯನ್ನು ಮುಂದುವರಿಸಬೇಕು" ಎಂದೂ ಹೇಳಿ, ತಮ್ಮ ವಿನಯವನ್ನು ಮೆರೆದಿದ್ದಾರೆ 'ಶ್ರೀ'ಯವರು. ಈಚೆಗೆ ಕನ್ನಡ ಛಂದಸ್ಸಿನ ಅಧ್ಯಯನ ವ್ಯಾಪಕವಾಗಿ ನಡೆದಿದೆ. ಆದರೆ ಅದಕ್ಕೆಲ್ಲ 'ಶ್ರೀ'ಯವರ 'ಕನ್ನಡ ಛಂದಸ್ಸಿನ ಚರಿತ್ರೆ'ಯೆ ತಳಹದಿಯೆಂಬುದನ್ನು ಮರೆಯುವಂತಿಲ್ಲ. ಯಾರು ವಿಮರ್ಶಿಸಿದರೂ, ಅವರ ನಿರೂಪಣೆಯ ಬಹುಭಾಗ ಗಟ್ಟಿಯಾಗಿಯೆ ಉಳಿಯುತ್ತದೆ. ಕೆಲವಂಶಗಳು ತಿದ್ದುಪಡಿಯನ್ನು ಬಯಸಬಹುದು, ಕೆಲವಂಶ ಗಳನ್ನು ಹೊಸದಾಗಿ ಸೇರಿಸಬೇಕಾಗಬಹುದು—ಇದಾವುದೂ 'ಶ್ರೀ'ಯವರ ಕೃತಿಯ ಮಹತ್ವವನ್ನು ತಗ್ಗಿಸಲಾರದು. ಸುಮಾರು ಅರ್ಧ ಶತಮಾನದಷ್ಟು ಹಿಂದೆಯೇ ಅವರು ಬರೆದ ಈ ಚರಿತ್ರೆ ಇಂದಿಗೂ ಮಾನ್ಯವಾಗಿದೆ, ಮಾರ್ಗದರ್ಶಕ ವಾಗಿದೆ. ತಮ್ಮ ಉದ್ದೇಶದ ಮಿತಿಯಲ್ಲಿ ಮತ್ತು ಕಾಲಮಾನದ ದೃಷ್ಟಿಯಿಂದ ಕೊಡಬಹುದಾದಷ್ಟನ್ನು 'ಶ್ರೀ'ಯವರು ಕೊಟ್ಟಿದ್ದಾರೆ. ಇದಕ್ಕಿಂತ ಹೆಚ್ಚಿನ ದನ್ನು ನಾವು ಕೇಳುವಂತಿಲ್ಲ.

೨

'ಕನ್ನಡ ಭಾಷೆಯ ಚರಿತ್ರೆ'ಯನ್ನು 'ಶ್ರೀ'ಯವರು ಟಿ. ಎಸ್. ವೆಂಕಣ್ಣಯ್ಯ ನವರೊಡನೆ ಬರೆದಿದ್ದಾರೆ. ಇದರಲ್ಲಿ ಶ್ರೀಕಂಠಯ್ಯನವರು ಬರೆದ ಭಾಗ ಯಾವುದೊ, ವೆಂಕಣ್ಣಯ್ಯನವರು ಬರೆದ ಭಾಗ ಯಾವುದೊ ನಮಗಿಂದು ತಿಳಿಯದು. ('ಕೈಪಿಡಿ'ಯ ಮೊದಲ ಮುದ್ರಣದಲ್ಲಿ, ೪ ಮತ್ತು ೫ನೆಯ ಭಾಗ ಗಳಾದ 'ಕನ್ನಡ ಭಾಷೆಯ ಚರಿತ್ರೆ' ಮತ್ತು 'ಕನ್ನಡ ಸಾಹಿತ್ಯ ಚರಿತ್ರೆ' ದ್ವಿತೀಯ ಸಂಪುಟವಾಗಿ ಪ್ರಕಟವಾಗಿದ್ದುವು. ಎರಡನೆಯ ಮುದ್ರಣದಲ್ಲಿ 'ಕನ್ನಡ ಭಾಷೆಯ ಚರಿತ್ರೆ' ಪ್ರಥಮ ಸಂಪುಟಕ್ಕೇ ಸೇರಿ, 'ಕನ್ನಡ ಸಾಹಿತ್ಯ ಚರಿತ್ರೆ'ಯೊಂದೇ ದ್ವಿತೀಯ ಸಂಪುಟವಾಗಿದೆ.)

'ಕನ್ನಡ ಭಾಷೆಯ ಚರಿತ್ರೆ'ಯಲ್ಲಿ ಕನ್ನಡ ಭಾಷೆಯ ಬೆಳವಣಿಗೆಯ ಒಂದು ಸ್ಥೂಲ, ಸಮರ್ಪಕ ನೋಟವಿದೆ; ಯಾವೊಂದು ಮುಖ್ಯವಾದ ಅಂಶವನ್ನೂ ಬಿಡದ ಸಮಗ್ರತೆ ಅದಕ್ಕುಂಟು. ವಿದ್ವತ್ಪೂರ್ಣವಾಗಿಯೂ, ಓದುಗರಿಗೆ ಭಾರ ವಾಗದಂತಹ ಸರಳವಾದ, ಅಚ್ಚುಕಟ್ಟಾದ ನಿರೂಪಣೆ ಇಲ್ಲಿನದು.

ಹನ್ನೊಂದು ಅಧ್ಯಾಯಗಳನ್ನೊಳಗೊಂಡಿದೆ 'ಕನ್ನಡ ಭಾಷೆಯ ಚರಿತ್ರೆ'. 'ಭಾಷಾ ಚರಿತ್ರೆಯ ಉದ್ದೇಶ ಮತ್ತು ಸಾಧನ' ಎಂಬುದು ಮೊದಲನೆಯ ಅಧ್ಯಾಯ. ಇದರಲ್ಲಿ ಶಾಬ್ದ, ಚಾಕ್ಷುಷ ಎಂಬ ಭಾಷಾರೂಪಗಳನ್ನೂ ವ್ಯಾವಹಾರಿಕ,ಗ್ರಾಂಥಿಕ ಎಂಬ ಭಾಷಾಭೇದಗಳನ್ನೂ ಹೇಳಿ,ಭಾಷಾಚರಿತ್ರೆಯ ಉದ್ದೇಶವನ್ನು ತಿಳಿಸಲಾಗಿದೆ. 'ಭಾಷೆಯ ಬೆಳೆವಳಿಗೆ: ಕಾರಣಗಳು—ಆಂತರ, ಬಾಹ್ಯ' ಎಂಬುದು ಎರಡನೆಯ ಅಧ್ಯಾಯ. ಇದರಲ್ಲಿ ಭಾಷೆಯ ರೂಪಾಂತರದ ಕಾರ್ಯಗಳನ್ನು ವಿವರಿಸಿದೆ: ಭಾಷೆಯ ಬೆಳವಣಿಗೆಯ ನೈಸರ್ಗಿಕ ಕಾರಣಗಳಾಗಿ ವರ್ಣೋತ್ಪತ್ತಿಸ್ಥಾನ ಮತ್ತು ಸೌಲಭ್ಯಾಕಾಂಕ್ಷೆಯನ್ನೂ ಬಾಹ್ಯಕಾರಣವಾಗಿ ಅನ್ಯ ಭಾಷಾ ಸಂಸರ್ಗವನ್ನೂ ಹೇಳಲಾಗಿದೆ. 'ದೇಶಭೇದದಿಂದಾಗುವ ಪರಿಣಾಮಗಳು' ಎಂಬ ಮೂರನೆಯ ಅಧ್ಯಾಯದಲ್ಲಿ, ಪ್ರಾಂತಭೇದಗಳನ್ನೂ ಭಿನ್ನ ಭಾಷೆಗಳನ್ನೂ ಚರ್ಚಿಸಲಾಗಿದೆ. ರಾಜಕೀಯ ವಿಭಾಗಗಳು, ಅನ್ಯಭಾಷಾಸಂಸರ್ಗ ಮುಂತಾ ದುವು ಪ್ರಾಂತಭೇದಗಳಾಗಲು ಕಾರಣಗಳು. 'ಕವಿರಾಜಮಾರ್ಗ' ಹೇಳುವ ಉತ್ತರ ದಕ್ಷಿಣ ಮಾರ್ಗಗಳನ್ನು ಕುರಿತ ಚರ್ಚೆಯನ್ನೂ ಇಲ್ಲಿ ಸಂಗ್ರಹಿಸ ಲಾಗಿದೆ. ದ್ರಾವಿಡಭಾಷೆಗಳ ಮಾತೃಭಾಷೆ ಸಂಸ್ಕೃತವಲ್ಲ ಎಂಬುದನ್ನು ದೇಶ್ಯ ಶಬ್ದಗಳು, ವ್ಯಾಕರಣ ಮೊದಲಾದ ಆಧಾರಗಳಿಂದ ಸ್ಥಾಪಿಸಲಾಗಿದೆ. ದ್ರಾವಿಡ ಭಾಷೆಗಳ ತಾಯಿ ಮೂಲದ್ರಾವಿಡವೆಂಬುದನ್ನು ತಿಳಿಸಿ, ಅದರಿಂದ ದ್ರಾವಿಡ

ಭಾಷೆಗಳು ನಿಷ್ಪನ್ನವಾದ ಬಗೆಯನ್ನು ರೇಖಾರೂಪವಾಗಿ ತೋರಿಸಲಾಗಿದೆ.

'ಕಾಲಭೇದದಿಂದಾಗುವ ಪರಿಣಾಮ : ಅವಸ್ಥಾಂತರಗಳು' ಎಂಬುದು ನಾಲ್ಕನೆಯ ಅಧ್ಯಾಯ. ಇಲ್ಲಿ ಕನ್ನಡ ಭಾಷೆಯ ಪ್ರಾಚೀನತೆಯನ್ನು ಉಲ್ಲೇಖಿಸಿ, ಅದರ ಅವಸ್ಥಾಭೇದಗಳನ್ನೂ ಆ ಬಗೆಗಿನ ಭಿನ್ನಾಭಿಪ್ರಾಯಗಳನ್ನೂ ನಿರೂಪಿಸಲಾಗಿದೆ. ರೈಸ್ ಸಾಹೇಬರ ವಾದದ ಸಾಧಕ–ಬಾಧಕಗಳನ್ನು ವಿವೇಚಿಸಿ, ತಮ್ಮದೇ ಆದ–ಸರ್ವಸಮ್ಮತವಾಗಬಹುದಾದ–ಸಿದ್ಧಾಂತವೊಂದನ್ನು ಲೇಖಕರು ಮಂಡಿಸಿದ್ದಾರೆ. ಐದನೆಯ ಅಧ್ಯಾಯ 'ಅಕ್ಷರ ಪ್ರಕರಣ' ಕನ್ನಡ ವರ್ಣಮಾಲೆಯನ್ನು ಕುರಿತ ಕೇಶಿರಾಜನ ಮತವನ್ನು ತಿಳಿಸಿ, ಮಹಾಪ್ರಾಣಾಕ್ಷರಗಳೂ ಐ, ಔ, ಅನುಸ್ವಾರಗಳೂ ಕನ್ನಡ ವರ್ಣಮಾಲೆಗೆ ಸೇರತಕ್ಕವಲ್ಲ ಎಂದು ನಿರ್ಧರಿಸಿದ್ದಾರೆ. ಹಳಗನ್ನಡ ಹೊಸಗನ್ನಡವಾಗುವಾಗ ಉಂಟಾಗುವ ಬದಲಾವಣೆಗಳನ್ನು—ಪಕಾರ ಹಕಾರವಾಗುವುದು, ವ್ಯಂಜನಾಂತ ಶಬ್ದಗಳು ಸ್ವರಾಂತವಾಗುವುದು, ವಿಜಾತೀಯ ಸಂಯುಕ್ತಾಕ್ಷರಗಳು ತಳೆಯುವ ವಿವಿಧ ರೂಪಗಳು, ಬಿಂದುಲೋಪ ಇತ್ಯಾದಿ—ಚೊಕ್ಕವಾಗಿ ಒಕ್ಕಣಿಸಲಾಗಿದೆ. 'ಶಬ್ದ ಪ್ರಕರಣ' ವೆಂಬ ಆರನೆಯ ಅಧ್ಯಾಯದಲ್ಲಿ ದೇಶ್ಯಗಳು, ಅನ್ಯದೇಶಗಳು ಎಂಬ ಎರಡು ಗುಂಪುಗಳನ್ನು ಹೇಳಿ, ದೇಶ್ಯ ಶಬ್ದಗಳ ಉತ್ಪತ್ತಿ, ಬೆಳವಣಿಗೆ, ಅರ್ಥವ್ಯತ್ಯಾಸ, ಅರ್ಥ ಸಂಕೋಚ ಮೊದಲಾದ ಪ್ರಕ್ರಿಯೆಗಳನ್ನು ಸೋದಾಹರಣವಾಗಿ ಪ್ರತಿಪಾದಿಸಲಾಗಿದೆ. ಸಂಸ್ಕೃತ, ಪ್ರಾಕೃತಗಳಲ್ಲದೆ ಪಾರ್ಸಿ, ಅರಾಬಿ, ಇಂಗ್ಲಿಷ್ ಮುಂತಾದ ಅನ್ಯದೇಶ್ಯಗಳು ಕನ್ನಡದಲ್ಲಿ ಬಂದು ನೆಲೆಗೊಂಡಿರುವುದನ್ನೂ ಅದಕ್ಕೆ ಕಾರಣಗಳನ್ನೂ ತಿಳಿಸಲಾಗಿದೆ. ಎಷ್ಟೋ ಶಬ್ದಗಳನ್ನು ದ್ರಾವಿಡ ಭಾಷೆಗಳಿಂದ ಸಂಸ್ಕೃತ, ಸ್ವೀಕರಿಸಿದೆಯೆಂಬ ಕಾಲ್ಡ್ವೆಲ್ ಸಾಹೇಬರ ಅಭಿಪ್ರಾಯವನ್ನು ಉಲ್ಲೇಖಿಸಲಾಗಿದೆ. ದೇಶ್ಯಶಬ್ದಗಳ ಅಳಿವಿಗೆ ಕಾರಣಗಳನ್ನು ಹೇಳಲಾಗಿದೆ.

'ನಾಮ ಪದಗಳು' ಎಂಬುದು ಏಳನೆಯ ಅಧ್ಯಾಯ. ಲಿಂಗ–ವಚನ, ವಿಭಕ್ತಿಗಳು ಇಲ್ಲಿ ಅವಲೋಕಿತವಾಗಿರುವ ವಿಷಯಗಳು. ದ್ರಾವಿಡ ಭಾಷೆಗಳ ವಿಶಿಷ್ಟ ಲಿಂಗ ವ್ಯವಸ್ಥೆಯನ್ನು ಲೇಖಕರು ವಿವರಿಸಿದ್ದಾರೆ. ವಿಭಕ್ತಿಗಳ ಬಗ್ಗೆ ಬರೆಯುವಾಗ, ಪಂಚಮೀವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲವೆಂಬುದನ್ನೂ ಪ್ರಥಮಾ ವಿಭಕ್ತಿಗೆ ಪ್ರತ್ಯೇಕ ವಿಭಕ್ತಿ ಪ್ರತ್ಯಯ ಇಲ್ಲವೆಂಬುದನ್ನೂ ಹೇಳಿದ್ದಾರೆ. ಮ್ ಮತ್ತು ನ್ ವಿಭಕ್ತಿ ಪ್ರತ್ಯಯಗಳಲ್ಲ, ಅವು ಲಿಂಗಸೂಚಕ ಎಂದು ವಿವರಿಸಿದ್ದಾರೆ. ಅನಂತರ ವಿಭಕ್ತಿ ಪ್ರತ್ಯಯಗಳ ಚರಿತ್ರೆಯ ನಿರೂಪಣೆ ಬಂದಿದೆ. ಸರ್ವ

ನಾಮಗಳು ಎಂಟನೆಯ ಅಧ್ಯಾಯದ ವಿಷಯ. ಗುಣವಾಚಕ, ಸಂಖ್ಯಾವಾಚಕಗಳು ಒಂಬತ್ತನೆಯ ಅಧ್ಯಾಯದಲ್ಲಿ, ಕ್ರಿಯಾಪದ ಹತ್ತನೆಯ ಅಧ್ಯಾಯದಲ್ಲಿ, ಅವ್ಯಯಗಳು ಹನ್ನೊಂದನೆಯ ಅಧ್ಯಾಯದಲ್ಲಿ ಸಮಾಲೋಚನೆಗೊಂಡಿವೆ. ಕ್ರಿಯಾಪದ ಸಂಬಂಧಿಯಾದ ಅಧ್ಯಾಯ ದೀರ್ಘವಾಗಿದ್ದು, ವಿಧ್ಯರ್ಥಕ ಕ್ರಿಯೆ, ನಿಷೇಧಕ್ರಿಯೆ, ಕಾಲವಾಚಕ ಪ್ರತ್ಯಯಗಳು, ಆಖ್ಯಾತ ಪ್ರತ್ಯಯಗಳು, ಅಸಂಪೂರ್ಣ ಕ್ರಿಯೆಗಳು, ಕರ್ಮಣಿ ಪ್ರಯೋಗ— ಇಷ್ಟನ್ನೂ ಕೂಲಂಕಷವಾಗಿ ವಿವರಿಸುತ್ತದೆ. ಕನ್ನಡದಲ್ಲಿ ಸಹಜವಾಗಿ ಕರ್ಮಣಿ ಪ್ರಯೋಗವಿಲ್ಲ ಎಂಬುದನ್ನು ಲೇಖಕರು ಗಮನಿಸಿದ್ದಾರೆ.

ಈ ಭಾಷಾಚರಿತ್ರೆ ಇಂದಿಗೂ ತುಂಬ ಉಪಯುಕ್ತವಾದದ್ದು. ಛಂದಸ್ಸಿನ ಚರಿತ್ರೆಯಲ್ಲಿ ಹೇಗೋ ಹಾಗೆ ಇಲ್ಲಿಯೂ ಆಧುನಿಕ ದೃಷ್ಟಿ ಕೆಲಸ ಮಾಡಿದೆ. ಯಾವುದೇ ದ್ರಾವಿಡ ಭಾಷೆಯನ್ನು, ಯಾವ ದಿಕ್ಕಿನಲ್ಲೇ ಆಗಲಿ, ಅಭ್ಯಸಿಸುವಾಗ ಎಲ್ಲ ದ್ರಾವಿಡ ಭಾಷೆಗಳ ತೌಲನಿಕ ನೋಟವೊಂದು ಅಗತ್ಯವೆಂಬುದನ್ನು ಇಲ್ಲಿಯೂ ಮನಗಾಣಿಸಲಾಗಿದೆ. ವಿಷಯ ಸಂಗ್ರಹ, ನಿರೂಪಣೆಯ ರೀತಿ— ಎರಡರ ದೃಷ್ಟಿಯಿಂದಲೂ ಈ ಚರಿತ್ರೆಗಳು ಸ್ಪೃಹಣೀಯ. ಇವುಗಳನ್ನು ನಾವಿಂದು ಬೆಳೆಸಬಹುದು ; ಆದರೆ ಬದಲಿಸುವಂಥದು ಹೆಚ್ಚೇನೂ ಇರಲಾರದು.

'ಶ್ರೀ' ಯವರು ಸೃಜನಸಮರ್ಥ ಲೇಖಕರು ಮಾತ್ರವಲ್ಲ, ಶಾಸ್ತ್ರಕಾರರೂ ಆಹುದೆಂಬುದನ್ನು 'ಕನ್ನಡ ಕೈಪಿಡಿ' ತೋರಿಕೊಡುತ್ತದೆ. ಆದರೆ ಅವರ ಶಾಸ್ತ್ರ ಪ್ರಜ್ಞೆ ಸೃಜನಶೀಲತೆಯನ್ನು ಹಿಮ್ಮೆಟ್ಟಿಸುವುದಿಲ್ಲ. ಎಂತಲೇ ಅವರ ಬರವಣಿಗೆಯಲ್ಲಿ ಯಾಂತ್ರಿಕ ಶುಷ್ಕತೆಯಿಲ್ಲ ; ಜೀವಸ್ಪಂದನವಿದೆ.[1]

೩

'ಕೈಪಿಡಿ' ಯ ದ್ವಿತೀಯ ಸಂಪುಟವಾದ 'ಕನ್ನಡ ಸಾಹಿತ್ಯದ ಚರಿತ್ರೆ' ಯನ್ನು—ಅದೂ ಶಾಸ್ತ್ರವೆಂದಿಟ್ಟುಕೊಂಡರೆ—ಈಗ ಪರಿಗಣಿಸಬಹುದು. 'ಶ್ರೀ'

1 ಇದು 'ಕನ್ನಡ ಛಂದಸ್ಸಿನ ಚರಿತ್ರೆ' ಯಲ್ಲಿ ಅಧಿಕ. ಅಲ್ಲಿ ಒಂದೆಡೆ ಅವರಾಡಿರುವ ಈ ಮಾತನ್ನು ನೆನೆಯಬಹುದು : "ಛಂದಶ್ಶಾಸ್ತ್ರಕಾರರು ಗಣಿತ ಪ್ರಕ್ರಿಯೆಯಿಂದ ಹುಟ್ಟಿಸಿದ ಕೌತೂಹಲಗಳನ್ನೆಲ್ಲಾ ಬದಿಗಿಟ್ಟು, ಕೇವಲ ಕವಿಗಳ ಮತ್ತು ಜನಗಳ ನಾಲಗೆಯಲ್ಲಿ ನಲಿಯುವ ಪದ್ಯಗಳನ್ನೇ ಹೆಚ್ಚಾಗಿ ವಿವರಿಸಿದ್ದಾಯಿತು". (ಛಂದಸ್ಸಿನ ಚರಿತ್ರೆಯಲ್ಲಿ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ಎದ್ದು ಕಾಣುವ ದೀರ್ಘ ವಾಕ್ಯ ರಚನೆಯ ಪ್ರವೃತ್ತಿ ಇಂದಿಗೆ ಸ್ವಲ್ಪ ಹಳೆಯದಾಗಿ ತೋರುತ್ತದೆ.)

ಯವರ ಈ ಚರಿತ್ರೆ ಅಪೂರ್ಣವಾಗಿದೆ; ನಾಗಚಂದ್ರನಿಗೇ ನಿಂತುಹೋಗಿದೆ. ಇದರಲ್ಲಿ ಪೀಠಿಕೆ, ಸಾಹಿತ್ಯ ಚರಿತ್ರೆಯ ವಿಷಯಗಳು, ಆರಂಭಕಾಲ (೧೦ ನೆಯ ಶತಮಾನದವರೆಗೆ), ಜೈನಕವಿಗಳು–ಎಂಬ ನಾಲ್ಕು ವಿಭಾಗಗಳಿವೆ. (ಇವುಗಳಲ್ಲಿ ಎರಡನೆಯದು ತುಂಬ ಬೆಲೆಯುಳ್ಳದ್ದು).

'ಶ್ರೀ' ಯವರ ಈ ರಚನೆ ಒಂದರ್ಥದಲ್ಲಿ ಕನ್ನಡದ ಪ್ರಪ್ರಥಮ ಸಾಹಿತ್ಯ ಚರಿತ್ರೆ ಎನ್ನಬಹುದು. ಅದಕ್ಕೆ ಮುನ್ನ ಕಿಟೆಲ್, ಬಿ. ಎಲ್. ರೈಸ್ ಮತ್ತು ಇ. ಪಿ. ರೈಸರ ಬರಹಗಳು ಇಂಗ್ಲಿಷಿನಲ್ಲಿದ್ದುವು. ಆರ್. ನರಸಿಂಹಾಚಾರ್ಯರ 'ಕವಿಚರಿತೆ' ವಸ್ತುತಃ ಸಾಹಿತ್ಯಚರಿತ್ರೆಯಲ್ಲ; ಅದರ ಗುದ್ದಲಿ ಕೆಲಸ. ಹೀಗಾಗಿ 'ಶ್ರೀ' ಯವರ ಸಾಹಿತ್ಯಚರಿತ್ರೆಗೊಂದು ಚಾರಿತ್ರಿಕ ಪ್ರಾಮುಖ್ಯ ವಿದೆ; ಮಾತ್ರವಲ್ಲ, ಅಂತರಂಗದ ದೃಷ್ಟಿಯಿಂದಲೂ ಅದು ತನ್ನದೇ ಆದ ವೈಶಿಷ್ಟ್ಯವನ್ನು ತಳೆದಿದೆ. ವಿಶೇಷತಃ ಜನಸಾಮಾನ್ಯರಿಗೆ ಮತ್ತು ವಿದ್ಯಾರ್ಥಿ ಗಳಿಗೆ ಅದು ಈಗಲೂ ಉಪಾದೇಯವೇ.

ತಮ್ಮ ಈ ಕೃತಿಯ ಬಗೆಗೆ 'ಶ್ರೀ'ಯವರು ಹೀಗೆ ಹೇಳಿಕೊಂಡಿದ್ದಾರೆ: "ಇದರಲ್ಲಿ ದೊಡ್ಡ ಗ್ರಂಥದಲ್ಲಿ ಹೇಳಬಹುದಾದ ಕವಿಗಳನ್ನೆಲ್ಲಾ ಹೇಳಲಾಗು ವುದಿಲ್ಲ. ಕಾವ್ಯ, ಸಾಹಿತ್ಯ ಎಂಬ ಶಬ್ದಗಳ ಶ್ಲಾಘ್ಯವಾದ ಅರ್ಥದ ಮೇಲೆ ದೃಷ್ಟಿ ಯಿಟ್ಟು ವಿದ್ಯಾರ್ಥಿಗಳ ಪ್ರಥಮ ಪರಿಚಯಕ್ಕಾಗಿ, ಪ್ರಸಿದ್ಧರಾಗಿಯೂ, ಬೇರೆ ಬೇರೆ ಮತಗಳಿಗೆ ಪ್ರತಿನಿಧಿಗಳಾಗಿಯೂ, ಯಾವುದಾದರೂ ಒಂದು ಕಾರಣ ದಿಂದ ಗಣ್ಯರಾಗಿಯೂ ಇರುವ ಕವಿಗಳನ್ನು ಮಾತ್ರ ಆಯ್ದುಕೊಂಡು, ಒಟ್ಟಿನ ಮೇಲೆ ಕನ್ನಡ ಸಾಹಿತ್ಯದ ಬೆಳವಣಿಗೆ, ವಿಭಾಗಗಳು, ಸ್ವರೂಪ, ಯೋಗ್ಯತೆ ಇವುಗಳನ್ನು ಸ್ಪಷ್ಟಪಡಿಸಬೇಕೆಂದು ಪ್ರಯತ್ನಪಟ್ಟಿರುತ್ತದೆ."

ಇಲ್ಲಿ 'ಶ್ರೀ' ಯವರದು ಮುಖ್ಯವಾಗಿ ಮೆಚ್ಚುಗೆಯ, ಗುಣ ಗ್ರಹಣದ ನಿಲುವು. ನವೀನ ದೃಷ್ಟಿಕೋನದಿಂದ ಕೃತಿಗಳನ್ನು ನಿಷ್ಠುರವಾಗಿ ವಿಮರ್ಶಿಸುವ ಕಾರ್ಯವನ್ನು ಅವರು ಹೆಚ್ಚಾಗಿ ಮಾಡಿಲ್ಲ. ಆ ಶಕ್ತಿ ಅವರಿಗೆ ಇರಲಿಲ್ಲವೆಂದಲ್ಲ; ಆದರೆ ಆ ಉದ್ದೇಶ ಅವರಿಗಿರಲಿಲ್ಲ. ಈ ಹೇಳಿಕೆಯನ್ನು ನೋಡಬಹುದು: "ಪೂರ್ವದ ಸಂಪ್ರದಾಯವಾದ ಸಂಸ್ಕೃತ ಕಾವ್ಯಲಕ್ಷಣ ರುಚಿಗೂ ಈ ಕಾಲದ ಇಂಗ್ಲಿಷ್ ಕಾವ್ಯಾಭ್ಯಾಸಬಲದಿಂದ ಉಂಟಾಗುವ ಹೊಸ ರುಚಿಗೂ ಬಹಳ ತಾರತಮ್ಯವಿರುವುದರಿಂದ(ಲೂ) ಆ ಭಾಗಕ್ಕೆ ಇಲ್ಲಿ ಹೆಚ್ಚಾಗಿ ಪ್ರವೇಶಮಾಡು ವುದು ಸೂಕ್ತವಾಗಿ ಕಾಣಿಸಲಿಲ್ಲ." ಆದರೆ ಹಳೆಯ ಕವಿಗಳ ದೋಷ ದೌರ್ಬಲ್ಯ ಗಳಿಗೆ 'ಶ್ರೀ'ಯವರು ಪೂರ್ತಿ ಕಣ್ಣುಮುಚ್ಚಿಕೊಂಡಿಲ್ಲವೆಂಬುದನ್ನು ಗಮನಿಸ

ಬೇಕು. ಒಟ್ಟಾರೆ, ಅವರ ವಿಮರ್ಶೆ ನವೋದಯ ವಿಮರ್ಶೆಯನ್ನು ಪ್ರಭಾವಿಸಿತು.

ಈ ಸಾಹಿತ್ಯ ಚರಿತ್ರೆಯಲ್ಲಿ ಎದ್ದು ಕಾಣುವ ಒಂದು ಪ್ರವೃತ್ತಿಯೆಂದರೆ, ಮೂಲಕಾವ್ಯಗಳಿಂದ ಪದ್ಯಗಳನ್ನು ಹೇರಳವಾಗಿ ಉದ್ಧರಿಸುವುದು. ಇದು ಒಮ್ಮೊಮ್ಮೆ ಅತಿಯೆನಿಸಿದರೂ ರಸಸ್ಥಾನಗಳನ್ನು ಕವಿಯ ಮಾತುಗಳಲ್ಲೇ ಓದುಗರಿಗೆ ಕಾಣಿಸಲು ನೆರವಾಗುತ್ತದೆ. ವಿದ್ಯಾರ್ಥಿಗಳಿಗೆ ಇದರಿಂದ ತುಂಬ ಪ್ರಯೋಜನವುಂಟು.

'ಶ್ರೀ' ಯವರ ಸುಪುಷ್ಟವಾದ ವಿಮರ್ಶೆಗೆ, ಪಂಪನ 'ಆದಿಪುರಾಣ' ವನ್ನು ಕುರಿತ ಈ ಹೇಳಿಕೆಯನ್ನು ಉದಾಹರಿಸಬಹುದು: "ಪಂಪನ ಧರ್ಮ ಶ್ರದ್ಧೆಯಿಂದಲೂ ಭಕ್ತಿ ಜ್ಞಾನ ವೈರಾಗ್ಯ ಭಾವನೆಗಳಿಂದಲೂ ಕವಿತಾವೇಶದ ಪ್ರಥಮ ಸ್ಫೂರ್ತಿಯಿಂದಲೂ ಪ್ರಜ್ವಲಿಸುವ ಈ ಕಾವ್ಯವು ಕಡೆಗೆ ಆತನ ಭಾರತಕ್ಕೆ ಒಂದು ಕೈ ಮೇಲೆಂದು ಹೇಳಿದರೂ ಹೇಳಬಹುದಾಗಿದೆ."

"ಗೆಲ್ಲಲಿ ಪಂಪ! ಆತನ ಬೆಳಕಿನಲಿ ಬೆಳಗಲಿ ಕನ್ನಡ!", "ಏನು ಕವಿತೆ! ಏನು ಕಾವ್ಯ!" ಎಂಬಂತಹ ಆವೇಶದ ಉದ್ಗಾರಗಳೂ ಇಲ್ಲಿ ಎಡೆ ಪಡೆದಿವೆ. ಅಲ್ಲಲ್ಲಿ ಟೀಕೆಗಳೂ ಉಂಟು. ನಿದರ್ಶನಕ್ಕೆ, 'ಗದಾಯುದ್ಧ' ವನ್ನು ಕುರಿತಂತೆ: "ಮುಡಿದ ದ್ರೌಪದಿಯ ಶೃಂಗಾರವರ್ಣನೆ–ಇದು ಇಲ್ಲಿ ಬೇಕೆ?"; ಪಂಪ ರಾಮಾಯಣದ ಬಗೆಗೆ: "ರಾಮಾಯಣದಲ್ಲಿ ಬರಬಹುದಾಗಿದ್ದ ಮಾನುಷ್ಯ ಲೋಕಜೀವನ ಅಷ್ಟೊಂದು ಕಾಂತಿಯಿಂದ ಪ್ರತಿಬಿಂಬಿಸಿಲ್ಲ"; 'ಅಜಿತಪುರಾಣ' ವನ್ನು ಉದ್ದೇಶಿಸಿ: "ಒಟ್ಟಿನಮೇಲೆ ಈ ಗ್ರಂಥದಲ್ಲಿ ಕವಿಗಿಂತಲೂ ಶಾಸ್ತ್ರಜ್ಞನು ಹೆಚ್ಚು ಕಾಣಿಸಿಕೊಳ್ಳುವನು." 'ಶ್ರೀ' ಯವರ ಹಾಸ್ಯಸ್ವಭಾವವೂ ಅಲ್ಲಲ್ಲಿ ಮಿನುಗುತ್ತದೆ. ಉದಾಹರಣೆಗೆ: "ಪೊನ್ನನೆಂದು ಹೆತ್ತ ತಾಯಿ ಕರೆದರೆ ಕಾವ್ಯ ಗೌರವವು ಪುನ್ನಮಾರ್ಯನೆಂದು ಕೂಗುತ್ತದೆ........ಸುಮನೋಬಾಣನಿಗೆ ಬಿರುದಿನಲ್ಲೇ ಪರ್ಯವಸಾನ...."

'ಶ್ರೀ' ಯವರ ಕವಿಮನೋಧರ್ಮ ಇಲ್ಲಿ ಉದ್ದಕ್ಕೂ ಕೆಲಸಮಾಡುತ್ತದೆ. ಒಂದೇ ಒಂದು ಉದಾಹರಣೆ: "ನಮ್ಮ ಕನ್ನಡ ಸಾಹಿತ್ಯವನ್ನು, ನಮ್ಮ ಕನ್ನಡ ನಾಡಿನ ಏರು ತಗ್ಗಿನ ಘಟ್ಟಗಳಲ್ಲಿ ನುಗ್ಗಿ ಬರುವ ಕಾವೇರಿ ನದಿಗೆ ಹೋಲಿಸಬಹುದು. ಅದರಂತೆಯೇ, ನಮ್ಮ ಸಾಹಿತ್ಯದ ಮೂಲವೂ ಕಾಡಿನಲ್ಲಿ ಅಡಗಿ ಹೋಗಿದೆ." ಈ ಹೋಲಿಕೆ ಮುಂದುವರಿಯುತ್ತದೆ.

ಕನ್ನಡಕ್ಕೆ ದುರಂತ ದೃಷ್ಟಿಯನ್ನು ಪ್ರವೇಶಗೊಳಿಸಿದ್ದು 'ಶ್ರೀ'ಯವರ

ಕೊಡುಗೆಗಳಲ್ಲೊಂದು. ಪ್ರಸ್ತುತ ಸಾಹಿತ್ಯ ಚರಿತ್ರೆಯಲ್ಲೂ ಅವರು ಪಂಪನ ಕರ್ಣ, ದುರ್ಯೋಧನರನ್ನೂ ನಾಗಚಂದ್ರನ ರಾವಣನನ್ನೂ ರುದ್ರನಾಯಕರನ್ನಾಗಿ ಕಂಡಿದ್ದಾರೆ.

ಒಟ್ಟಿನಲ್ಲಿ, 'ಶ್ರೀ'ಯವರ ರಸಿಕತೆ, ಆರ್ದ್ರಮನಸ್ಸು, ಉತ್ಸಾಹ, ಭಾವುಕತೆ, ವಿಮರ್ಶನಶಕ್ತಿ, ಪಾಂಡಿತ್ಯ—ಎಲ್ಲವನ್ನೂ ಅವರ 'ಕನ್ನಡ ಸಾಹಿತ್ಯದ ಚರಿತ್ರೆ' ಕನ್ನಡಿಸುತ್ತದೆ. ಅದು ಹಲವು ಗುಣಗಳ ವರ್ಣರಂಜಿತ ಮೇಳ. ಮುನ್ನುಡಿಯಲ್ಲಿ ಕುವೆಂಪು ಆಡಿರುವ ಮಾತು ಪ್ರಮಾಣಭೂತವಾದದ್ದು :

"ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗಿದ್ದ ವಿದ್ವತ್ತು, ಪರಿಶ್ರಮ, ಸಹೃದಯತೆ, ರಸಜ್ಞತೆ, ತೋಲನ ಸಾಮರ್ಥ್ಯ, ಸೂಕ್ಷ್ಮದೃಷ್ಟಿ, ಉಕ್ತಿಗಾಂಭೀರ್ಯ, ಒಮ್ಮೊಮ್ಮೆ ದಾಕ್ಷಿಣ್ಯಪರವಾದರೂ ಒಟ್ಟಿನಲ್ಲಿ ನಿಷ್ಪಕ್ಷಪಾತವಾದ ಋಜುಮತಿ ಮತ್ತು ಪ್ರಥಮವರ್ಗದ ವಿಮರ್ಶಕನಿಗೆ ಸಹಜವಾದ ಅಧಿಕಾರವಾಣಿ ಇವುಗಳ ಪ್ರಯೋಜನ ಕನ್ನಡನಾಡಿಗೆ ಸಂಪೂರ್ಣವಾಗಿ ಲಭಿಸಿ, 'ಕನ್ನಡ ಸಾಹಿತ್ಯ ಚರಿತ್ರೆ' ಅವರ ಕೈಯಿಂದಲೆ ಸಮಗ್ರವಾಗಿ ರಚಿತವಾಗಿದ್ದರೆ, ಸಾಹಿತ್ಯದ ಚರಿತ್ರೆ ಮಾತ್ರವಲ್ಲದೆ ಅದೆಂತಹ ರಸವಿಮರ್ಶೆಯ ಜೇನುಣಿಸು ಕನ್ನಡಿಗರಿಗೆ ಲಭಿಸುತ್ತಿದ್ದಿತು ಎಂಬುದಕ್ಕೆ ಪ್ರಕಟವಾಗಿರುವ ಈ ಗ್ರಂಥಭಾಗವೇ ಸಾಕ್ಷಿಯಾಗಿದೆ."

'ಶ್ರೀ'ಯವರ ಸಾಹಿತ್ಯ ಚರಿತ್ರೆಯಲ್ಲಿ ಸಾಹಿತ್ಯವೂ ಉಂಟು, ಚರಿತ್ರೆಯೂ ಉಂಟು. ಇದೇ ಅದರ ಅಗ್ಗಳಿಕೆ.

ಸಿ.ಪಿ.ಕೆ.



ದೇಶ ಎಂಥ ಜನರನ್ನು ನಿರ್ಮಿಸುತ್ತದೆ ಎಂಬುದೇ ನಾಗರಿಕತೆಯ ನಿಜವಾದ ಒರೆಗಲ್ಲು. ಜನಸಂಖ್ಯೆಯಲ್ಲ, ವೈಶಾಲ್ಯವಲ್ಲ.

—ಎಮರ್‌ಸನ್

# 'ಶ್ರೀ'ಯವರ ಎರಡು ಅಪರೂಪ ಕವಿತೆಗಳು

ಕನ್ನಡ ಸರ್ವೋದಯದ ಪ್ರವರ್ತಕರೂ ಕನ್ನಡದ ಕಣ್ವರೂ ಎನಿಸಿಕೊಂಡ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದು, ಅನಂತರ ಅದರ ಜತೆಗೇ ಕನ್ನಡ ಪ್ರಾಧ್ಯಾಪಕರೂ ಆಗಿದ್ದವರು. ಕನ್ನಡ ಭಾಷೆ ಹೇಗೆ ಬೆಳೆಯಬೇಕು, ಕನ್ನಡ ಸಾಹಿತ್ಯ ಯಾವ ಯಾವ ದಿಕ್ಕಿನಲ್ಲಿ ಪ್ರಗತಿ ಸಾಧಿಸಬೇಕು ಎಂದು ಚಿಂತನದಲ್ಲಿ ತೊಡಗಿದ ಶ್ರೀಯವರು 'ಸಮಗ್ರವಾದ ಸಾಹಿತ್ಯ ಬೆಳಸಿಗೆ ಅಗತ್ಯವಾದುದೆಲ್ಲವನ್ನೂ ಮಾಡಿದರು. ಒಂದು ದೃಷ್ಟಿಯಲ್ಲಿ ಕನ್ನಡದ ಪುಣ್ಯಪುರುಷರಾಗಿ ಬಂದ ಅವರ ಕಾಲಕ್ಕೆ ಕನ್ನಡದ ಪುಣ್ಯವೂ ಕೂಡಿ ಬಂದಿರಬೇಕು ಎನ್ನಿಸುತ್ತದೆ. ಅವರು ರಿಜಿಸ್ಟ್ರಾರರಾಗಿದ್ದ ಕನ್ನಡ ದೇಶದ ಮೊದಲ ವಿಶ್ವವಿದ್ಯಾನಿಲಯ ಮೈಸೂರು ವಿಶ್ವವಿದ್ಯಾನಿಲಯ ಅವರ ಕಾರ್ಯದಲ್ಲಿ ಇಂಬಾಗಿ ನಿಂತಿತು. ಕನ್ನಡಕ್ಕಾಗಿ ಮುಡಿಪಾದ ಕನ್ನಡದ ಸ್ವಯಂಸೇವಕ ದಳ—ಕನ್ನಡ ದಳವಾಗಿ ಅವರಿಗೆ ನೆರವಾಗಲು, ಅವರು ಮಹಾರಾಜಾ ಹಾಗೂ ಸೆಂಟ್ರಲ್ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿದ್ದುದೂ ಒಂದು ಕಾರಣ. ವಿಶ್ವವಿದ್ಯಾನಿಲಯ ಅವರ ಕನ್ನಡ ಪ್ರಯೋಗ ಪ್ರಗತಿಯ ಕಾರ್ಯಕ್ಷೇತ್ರವಾಯಿತು. ಅವರ ಉತ್ಸಾಹ, ಕಳಕಳಿ ಮೇರೆಯಿಲ್ಲದುದಾಗಿದ್ದು ಎಲ್ಲರನ್ನೂ ಅವರ ಕಾರ್ಯಕ್ಕೆ ನೆರವಾಗುವಂತೆ ಸೆಳೆಯುವ ಕಾಂತಶಕ್ತಿ ಪಡೆದಿದ್ದುವು. ಶ್ರೀಯವರು ತಮ್ಮ ಕನ್ನಡತನದ ತೇಜಸ್ಸನ್ನು ಸಾವಿರಾರು ಹೃದಯಗಳಲ್ಲಿ ಹರಿಯಬಿಟ್ಟರು—ಎಲ್ಲರೂ ಕನ್ನಡದ ಏಳಿಗೆ, ಮೇಲ್ಮೆಗಾಗಿ ದುಡಿಯುವಂತೆ ಪ್ರೇರಕಶಕ್ತಿಯಾಗಿ, ಮಾರ್ಗದರ್ಶಕರಾಗಿ ನಿಂತರು. "ನುಡಿದು ಕಲಿಸಿದಿರಿ, ನುಡಿಯದೆ ಮತ್ತೆ ಕಲಿಸಿದಿರಿ, ದುಡಿದು ಕಲಿಸಿದಿರಿ, ಮನವರಕೆಗಳನೆಚ್ಚರಿಸಿ ಎಳೆಯರೆದೆಯಲಿ ಹಾಡು ವಾಸೆಯನುಸುಳಿಸಿದಿರಿ" ಎಂದು ಮಾಸ್ತಿಯವರು ಶ್ರೀಯವರನ್ನು ಕುರಿತು ಹೇಳಿರುವುದು ಸೂಕ್ತವೂ ಹೌದು ಸಾರ್ಥವೂ ಹೌದು. ಶ್ರೀಯವರು ಕನ್ನಡದ ಎಲ್ಲ ಪ್ರಗತಿಪ್ರಯತ್ನಗಳಿಗೂ ಚೈತನ್ಯದುಸಿರು, ಜೀವರಕ್ತ ಮೂಲಪುರುಷರಾಗಿದ್ದರೆಂಬುದು ಸತ್ಯ. ತಾವು ದುಡಿಯುತ್ತ ದಾರಿಯನ್ನು ಹಸನು ಮಾಡಿಕೊಟ್ಟು ಬೇರೆಯವರು ಆ ಹಾದಿಯಲ್ಲಿ ನಡೆಯುವಂತೆ ಕೈಹಿಡಿದು ನಡೆಸುತ್ತಿದ್ದರು. ಹಾಗೆ ಕೈಹಿಡಿದು ನಡೆಸುವಾಗಿನ ಕಾರ್ಯದಲ್ಲಿ ಕನ್ನಡ ಸಂಘಗಳಿಗೆ ಭೇಟಿ ಕೊಡುವುದೂ ಅವರ ಪ್ರಕಟನೆಗಳಿಗೆ ನೆರವಾಗುವುದೂ ಶ್ರೀಯವರು ಕನ್ನಡದ ಕೈಂಕರ್ಯದಲ್ಲಿ ಮುಖ್ಯ ಅಂಶಗಳೆಂದು ತಿಳಿದು ನಡೆಯುತ್ತಿದ್ದರು.

ಅಂತಹ ನೆರವಿನ ಎರಡು ಪ್ರಮುಖ ಘಟನೆಗಳೆಂದರೆ, ಎರಡು ಕನ್ನಡ ಸಂಘಗಳು ಪ್ರಕಟಿಸಿದ ಯುವಕರ ಕವನ ಸಂಕಲನಗಳಿಗೆ ಶ್ರೀಯವರು ಬರೆದುಕೊಟ್ಟ ಮುನ್ನುಡಿಗಳು. ಬೇರೆ ಪುಸ್ತಕಗಳಿಗೆ ಅವರು ಮುನ್ನುಡಿಗಳನ್ನು ಬರೆದಿದ್ದರೂ ಅವೆಲ್ಲ ಗದ್ಯದಲ್ಲಿದ್ದುವು. ಈ ಎರಡು ಸಂಕಲನಗಳ ಮುನ್ನುಡಿಗಳು ವಿಶಿಷ್ಟತೆ ಯನ್ನು ಪಡೆದಿರುವುದು—ಶ್ರೀಯವರು ಪದ್ಯರೂಪದಲ್ಲಿ ಮುನ್ನುಡಿ ರಚಿಸಿ ಕೊಟ್ಟಿದ್ದಾರೆಂಬುದು!

ಆಚಾರ್ಯ ಶ್ರೀಕಂಠಯ್ಯನವರು ಕನ್ನಡದ ಕೆಲಸಕ್ಕಾಗಿ ಕರ್ನಾಟಕದ ಉದ್ದಗಲದಲ್ಲಿ ಎಲ್ಲ ಕಡೆಯೂ ಸಂಚಾರ ಕೈಗೊಳ್ಳುತ್ತಿದ್ದರು. ಎಲ್ಲಿಗೆ ಕರೆದರೂ ಇಲ್ಲವೆನ್ನದೆ ಹೋಗಿಬರುತ್ತಿದ್ದರು. ಕನ್ನಡದ ಪ್ರಚಾರ, ಕನ್ನಡತನದ ಪ್ರಸಾರವೇ ಜೀವದುಸಿರೆಂದು ನಂಬಿದ್ದ ಅವರು ಯಾವುದೇ ಸಣ್ಣ ಊರು ಅಥವಾ ಹಳ್ಳಿ ಯಲ್ಲಿ ಕನ್ನಡ ಸಂಘದವರು ತಮ್ಮನ್ನು ಕರೆದರೂ ಅಲ್ಲಿಗೆ ಹೋಗಲು ಒಪ್ಪುತ್ತಿ ದ್ದರು. ರಾಜಮನೆತನದ ಗೌರವ, ಬೆಂಬಲಗಳಿದ್ದುದು, ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದುದು ಅವರ ಈ ಕಾರ್ಯದಲ್ಲಿ ರಾಜಭೋಗವನ್ನೇ ಒದಗಿಸು ತ್ತಿದ್ದುದೂ ನಿಜ. ಎಲ್ಲಿ ಹೋದರೂ ಬಹಳ ವೈಭವದಿಂದ ಅವರನ್ನು ಬರಮಾಡಿ ಕೊಳ್ಳುತ್ತಿದ್ದರು. ಅವರ ವಾಸ್ತವ್ಯ ಅನುಕೂಲವಾಗಿ, ಹಿತವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ಅದಕ್ಕೆಲ್ಲ ಅರ್ಹತೆ ಪಡೆದಿದ್ದ ಶ್ರೀಯವರು ಅದನ್ನು ಸಂತೋಷದಿಂದ ಒಪ್ಪಿಸಿಕೊಳ್ಳುತ್ತಿದ್ದರು. ಎಲ್ಲಕಡೆಯೂ ಹರಡಿಕೊಂಡ ಅವರ ಶಿಷ್ಯವರ್ಗದವರು ಅವರಿಗೆ ಅಪಾರ ಗೌರವ ಸಲ್ಲಿಸಿ ಅವರನ್ನು ಚೆನ್ನಾಗಿ ನೋಡಿ ಕೊಳ್ಳುತ್ತಿದ್ದರು—ಮೈಸೂರು ಪ್ರದೇಶದಲ್ಲಿ. ಅದರ ಹೊರಗೆ, ಕರ್ನಾಟಕದ ಉಳಿದ ಪ್ರದೇಶಗಳಲ್ಲಿ ಕನ್ನಡತನದ ಪ್ರತೀಕವಾಗಿ ಶ್ರೀಯವರನ್ನು ಕಂಡು ಗೌರವ, ಆದರಗಳಿಂದ ಅವರನ್ನು ನೋಡಿಕೊಳ್ಳುತ್ತಿದ್ದರು. ಶ್ರೀಯವರು ತಮ್ಮ ಸತ್ಕಾರವನ್ನು ಒಪ್ಪಿಕೊಂಡರೇ ತಾವು ಧನ್ಯರೆಂದು ಹಲವು ಹತ್ತುಜನ, ಮತ್ತು ಸಂಸ್ಥೆಗಳು ಆಗ ಭಾವಿಸಿ, ಹೇಗಾದರೂ ತಮ್ಮಲ್ಲಿಗೆ ಬರಬೇಕೆಂದು ಶ್ರೀಯವರನ್ನು ಕರೆಯುತ್ತಿದ್ದರು. ಶ್ರೀಯವರೂ ಭಾಷಣಕ್ಕಾಗಿ ಅಲ್ಲಿಗೆ ಹೋಗುತ್ತಿದ್ದರು. ಸಂದೇಶ ಕೇಳಿದ ಕನ್ನಡ ಸಂಘಗಳಿಗೆ ಸಂದೇಶ ಕಳಿಸುತ್ತಿದ್ದರು. ಕನ್ನಡ ಬರಹ ಗಾರರು ಕನ್ನಡ ಪುಸ್ತಕಗಳಿಗೆ—ಅದರಲ್ಲಿಯೂ ಕವಿತಾಸಂಕಲನಗಳಿಗೆ ಮುನ್ನುಡಿ ಕೇಳಿದರೆ ಸಂತೋಷದಿಂದ ಬರೆದುಕೊಡುತ್ತಿದ್ದರು.

ಧಾರವಾಡ ಜಿಲ್ಲೆಯ ಕುಂದಗೋಳದಲ್ಲಿ 'ತಾರೆಯ ಬಳಗ' ಎಂಬ ಒಂದು ಸಣ್ಣ ಸಂಘ ಕನ್ನಡ ಪ್ರೇಮಿಗಳ ಕೂಟವಾಗಿತ್ತು. ಇಂದು ಆ ತಾರೆಯಬಳಗದ

ಹೆಸರು ಯಾರಿಗೂ ನೆನಪಿರಲಾರದು. ಪ್ರಾಯಶಃ ತಾರೆಯ ಬಳಗದ ಸದಸ್ಯರಾಗಿದ್ದವರಿಗೂ ಅದರ ನೆನಪುಂಟೋ ಇಲ್ಲವೋ ತಿಳಿಯದು. ೧೯೩೭ರಲ್ಲಿ ಎಂದರೆ ನಲವತ್ತಾರು ವರ್ಷಗಳ (೪೬ ವರ್ಷ) ಹಿಂದೆ ತಾರೆಯ ಬಳಗದ ಸದಸ್ಯರು ತುಂಬಾ ಉತ್ಸಾಹದಿಂದ ಒಂದು ಕವನದ ಸಂಕಲನವನ್ನು ಕವನ ಪ್ರಕಟಿಸಿದರು. ತಾರೆಯ ಬಳಗದ ಅಧ್ಯಕ್ಷ ಪಾಟೀಲ ಲಕ್ಷ್ಮಣಗೌಡ ಅವರು ತಮ್ಮ ಅರಿಕೆಯಲ್ಲಿ "ಇವು ಒಂದು ಮಹಾಪೂಜೆಯಲ್ಲಿ ಭಕ್ತಿಯಿಂದ ಹೊವ್ಮಿದುವು" ಎಂದು ಹೇಳಿಕೊಂಡು, ಪ್ರಕಟಿಸಿದ ಈ ಕವನ ಸಂಗ್ರಹ ಅಲ್ಲಿನ ಜನಕ್ಕೇ ಈಗ ನೆನಪಿದೆಯೋ ಇಲ್ಲವೋ. ಈ ಕವಿತೆಯು ಶ್ರೀಯವರು ತಮ್ಮ ಮಿತ್ರರಿಗೆ ಹಂಚಲು ಪ್ರಕಟಿಸಿದ ಅವರ ಬಿಡಿಕವನಗಳ ಸಂಗ್ರಹ 'ಹೊಂಗನಸುಗಳು' (೧೯೪೩) ವಿನಲ್ಲಿಯೂ ಸೇರಿಲ್ಲ.

ಹೈದರಾಬಾದಿನ ತರುಣರ ತಂಡದವರು ೧೯೩೬ರಲ್ಲಿ 'ಮೊಗ್ಗಿನ ಮಾಲೆ' ಎಂಬ ಹೆಸರಿನಲ್ಲಿ ಕೆಲವು ತರುಣ ಕವಿಗಳ ಪದ್ಯಗಳ ಸಂಗ್ರಹವೊಂದನ್ನು ಪ್ರಕಟಿಸಿದರು. ಈ ಸಂಗ್ರಹಕ್ಕೆ ಶ್ರೀಯವರು ೧೨-೩-೧೯೩೭ರಂದು ಪದ್ಯರೂಪದ ಮುನ್ನುಡಿ ಬರೆದುಕೊಟ್ಟಿದ್ದಾರೆ. ಇದು 'ಹೂ' ಗಿಂತಲೂ ಕೊಂಚ ಮೊದಲೇ ಪ್ರಕಟವಾದುದರಿಂದ—'ಹೂ' ಪ್ರಕಟವಾದುದು ೧೯೩೭ರ ಆಗಸ್ಟನಲ್ಲಿ—ಮೊದಲು ಈ ಮುನ್ನುಡಿಯನ್ನು ನೋಡಬಹುದು. 'ಮೊಗ್ಗಿನಮಾಲೆ' ಯೇ ಮೊದಲು 'ಹೂ' ಆ ಮೇಲೆ—ಇದು ಪ್ರಕೃತಿಯ ನಿಯಮವೂ ಹೌದು—ಅರ್ಥಪೂರ್ಣವೂ ಹೌದು ತಾನೇ! ಈ ಮುನ್ನುಡಿಯ ಕವಿತೆಯೂ 'ಹೊಂಗನಸುಗಳು' ಸಂಗ್ರಹದಲ್ಲಿ ಸೇರಿಲ್ಲ. ಈ ಎರಡು ಮುನ್ನುಡಿಗಳೂ ಈಚೆಗೆ ಪ್ರಕಟವಾದ 'ಶ್ರೀ ಸಾಹಿತ್ಯ' (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ೧೯೮೩) ದಲ್ಲಿ ಸೇರಿದೆ. 'ಹೂ' ಹಾಗೂ 'ಮೊಗ್ಗಿನಮಾಲೆ' ಪುಸ್ತಕಗಳ ಪ್ರತಿಗಳು ಬಹಳ ಅಪರೂಪವಾಗಿದ್ದು, ಸಿಗುವುದೇ ಇಲ್ಲವೆನ್ನುವಂತಿದೆ, ಈಗ ಈ ಪದ್ಯಗಳ ಸೊಗಸನ್ನು ಅರಿಯಲು ಅವುಗಳ ಪೂರ್ಣಪಾಠವನ್ನು ನೋಡಬೇಕು. ಮೊದಲು 'ಮೊಗ್ಗಿನ ಮಾಲೆ' ಗೆ ಶ್ರೀಯವರು ಬರೆದ ಮುನ್ನುಡಿ.

## ಮುನ್ನುಡಿ

ನಿಮ್ಮ ಈ ಇನ್ನುಡಿಗೆ ಕೇಳುವಿರಿ ನನ್ನ
ಮುನ್ನುಡಿಯ, ಕಳೆಯದೇ, ನುಡಿದೆನೇನನ್ನ ?
ನಿಮ್ಮೊಲುಮೆ ಸವಿನೆನಪುನಲ್ಲದೇನನ್ನ ?

ನಲವಿನಲಿ ನಾಡಹಬ್ಬಕೆ ಕರೆದಿರೆನ್ನ,
ಒಲವಿನಲಿ ಕನ್ನಡದ ಕರುಳೆಂದಿರೆನ್ನ.
ಮೆಚ್ಚಿತ್ತು ಗೆಲವೆರೆದು ಕಳುಹಿದಿರಿ ಮುನ್ನ.

ನಾ ನಿಮ್ಮ ನಂಟನಾದೆನು ನಿಮ್ಮ ಬಂಟ—
ತಾಯ ಮೆರೆಸುವಬಹೆವು ಬನ್ನಿ ದೆಸೆಯಂಟ
ಬಂಟನಾಗೊಬ್ಬ ಬರೆ, ಮತ್ತೊಬ್ಬ ನಂಟ.

ಹಿರಿಯ ಪರಿಸೆಯ ಕೂಡಿ, ಕನ್ನಡದ ನುಡಿಯ,
ಕನ್ನಡಿಗತನವೆಂಬ ಬಾವುಟದ ಕುಡಿಯ
ಕಟ್ಟಿದಿರಿ, ತಾಯಿಗಿಟ್ಟಿರಿ ಹೊನ್ನ ಮುಡಿಯ.

ಮನಸು ನಿಲಲಾರದೆಯೆ ನಾನೋಡಿ ಬಂದೆ
ಮೊಗು ಮಾಳೆಯನಲ್ಲಿ ನಾನೋಡಿ ಬಂದೆ
ಪರಿಸೆಗಳ ಬೆಳಗಿದಿರಿ, ಕಂಡು ನಾನೆಂದೆ—

ಈ ನಾಡು ಕನ್ನಡದ ಹೊಳೆಗೆ ತಲೆಮೂಡು,
ಕಾಶಿ ಕನ್ನಡಿಗನಿಗೆ ಹಿರಿಯರಾ ಬೀಡು ;
ಅವರ ಬೀಜವ ನೆಲದಿ ಮರೆಸಿತ್ತು ಸೂಡು—

ಮಳೆಯಾಯ್ತು —ಅವರ ತೇಜವೆ, ಮತ್ತೆ, ನೋಡು,
ನೆಲವ ಬಿರಿಯುತ ಮೊಳೆತು ಮೊಗೆ ಹೂ ಬೀಡು!
ಅರಳಿದರು, ಎಚ್ಚೆತ್ತರದೊ ಬೆಳ್ಳಿ ಮೂಡು !

ಮುನ್ನುಡಿಯ ಕೇಳುವಿರಿ, ಕೆಳೆಯರೇ, ನನ್ನ
ಇನ್ನುಡಿಯ ಹಾಡಿದಿರಿ, ಕೂಡಿದಿರಿ, ಮುನ್ನ
ಸವಿನೆನಪನಲ್ಲದೇ ನುಡಿವೆನೇನನ್ನ ?

ಈ ಮುನ್ನುಡಿಯ ಸಂವಿಧಾನವನ್ನು ಚೊಕ್ಕವಾಗಿ ರೂಪಿಸಿಕೊಂಡಿದಾರೆ ಶ್ರೀಯವರು. ಮೊದಲು ಆರುಸಾಲು–ಒಂದೇ ಪ್ರಾಸವನ್ನುಳ್ಳದ್ದು. ಅನಂತರ ಮೂರು ಮೂರು ಸಾಲಿಗೊಂದು ಪ್ರಾಸವಿಟ್ಟು ಒಂಬತ್ತು ಸಾಲು ಬರುತ್ತದೆ —ಮತ್ತೆ ಆರು ಸಾಲಿಗೆ ಒಂದೇ ಪ್ರಾಸವಿದ್ದು, ಕೊನೆಯ ಮೂರು ಸಾಲಿನಲ್ಲಿ ಮುನ್ನುಡಿಯ ಪ್ರಾರಂಭದ ಮೂರು ಸಾಲನ್ನೇ ಸ್ವಲ್ಪ ಬದಲಾಯಿಸಿ ಉಪಯೋಗಿಸಿ. ಅದೇ ಪ್ರಾಸವನ್ನೇ ಬಳಸಿಕೊಂಡಿದ್ದಾರೆ. ಹೀಗಾಗಿ ಪ್ರಾರಂಭ

ಹಾಗೂ ಮುಕ್ತಾಯಗಳು ಒಂದೇ ತೆರನಾಗಿದ್ದು, ಅಚ್ಚುಕಟ್ಟಾದ ಸಂವಿಧಾನದ ರೀತಿ ಕಾಣುತ್ತದೆ. ಪ್ರಾಸವಿನ್ಯಾಸದ ಸೊಗಸು, ಬೇರೆ ಬೇರೆ ಅರ್ಥಗಳಲ್ಲಿ ಒಂದೇ ಪದವನ್ನು ಬಳಸುವುದರಲ್ಲಿಯೂ ಇದೆಯೆಂಬುದು ಇಲ್ಲಿ ಚೆನ್ನಾಗಿ ಮೂಡಿಬಂದುದನ್ನು ಕಾಣಬಹುದು. "ನನ್ನ" ಹಾಗೂ "ಏನನ್ನ" ಎಂಬುದರಲ್ಲಿ, ಹಾಗೆಯೇ "ನಾನೋಡಿ ಬಂದೆ", ಮತ್ತು "ನಾ ನೋಡಿ ಬಂದೆ" ಎಂಬಲ್ಲಿ ಈ ಚಂದದ ಪ್ರಯೋಗವನ್ನು ನೋಡಬಹುದು. ಉತ್ತಮವಾದ ಹೊದಿಕೆಯ ನಡುವೆ ಸುಂದರವಾಗಿ ಅಚ್ಚುಹಾಕಿದ ಪುಸ್ತಕದಂತೆ ಪ್ರಾರಂಭ ಹಾಗೂ ಮುಕ್ತಾಯದ ಆತ್ಮೀಯ ಸರಳ ಪ್ರಾಸಬದ್ಧ ಮಾತುಗಳ ಹಿಡಿಕೆಯಲ್ಲಿ ಮುನ್ನುಡಿ ಸೊಗಸಾಗಿದೆ.

ನಾಲ್ಕು ಮಾತಿನಲ್ಲಿ ಈ ಮುನ್ನುಡಿಯ ಸೊಗಸನ್ನು, ಚಂದವನ್ನು ಪರಿಚಯ ಮಾಡಿಕೊಡಲು ಪ್ರಯತ್ನಿಸುತ್ತೇನೆ. ಪ್ರಾರಂಭದಲ್ಲಿ ಶ್ರೀಯವರು ತಮ್ಮನ್ನು ಕರೆಸಿಕೊಂಡು ಸಂಭ್ರಮದಿಂದ ನಾಡ ಹಬ್ಬವನ್ನು ಆಚರಿಸಿ, ತಮ್ಮನ್ನು ಗೌರವಿಸಿದ ಗೆಳೆಯರನ್ನು ಸಂಬೋಧಿಸಿದ್ದಾರೆ. ಅವರೆಲ್ಲ ಶ್ರೀಯವರನ್ನು "ನಲವಿನಲಿ ನಾಡಹಬ್ಬಕೆ" ಕರೆದರು. ಒಲವಿನಲ್ಲಿ ಅವರನ್ನು ಗೌರವಿಸಿದರು–ಅಷ್ಟೇಅಲ್ಲ ತುಂಬಾ ಆತ್ಮೀಯತೆಯಿಂದ "ಕನ್ನಡದ ಕರುಳು" ಎಂದು ಶ್ರೀಯವರನ್ನು ಕರೆದು "ಮೆಚ್ಚಿತ್ತು" ಕಳಿಸಿದರು. ಈ ಉತ್ಸವದಲ್ಲಿ ಪಾಲುಗೊಂಡ ಶ್ರೀಯವರು ಇವರೆಲ್ಲರಲ್ಲಿ ತಮ್ಮ ಕರುಳಿನ ಬಳ್ಳಿ ಕಂಡುಕೊಂಡರು. ಅಂತೆಯೇ ಅವರ ಉತ್ಸಾಹ, ಆನಂದದಲ್ಲಿ ಪಾಲುಗೊಂಡ ಫಲವಾಗಿ ಶ್ರೀಯವರಲ್ಲಿ ಹೆಚ್ಚಿನ ಉತ್ಸಾಹ, ಭರವಸೆ ಬೀಡು ಬಿಟ್ಟುವು. ತರುಣರ ತಂಡ ಶ್ರೀಯವರಿಗೆ "ಗೆಲವೆರೆದು"-ಭವಿಷ್ಯದ ಬಗ್ಗೆ, ಕನ್ನಡ ಮಾತು ತನ್ನ ತನವಲ್ಲಿ ಮೆರೆಯುವ ಬಗ್ಗೆ ನಂಬಿಕೆ, ಭರವಸೆ ತುಂಬಿದರು. 'ಗೆಲವು' ಎಂಬ ಮಾತಿನ ಅರ್ಥ ಇಲ್ಲಿ ಭಾವವ್ಯಾಪ್ತಿಯಲ್ಲಿ ವಿಸ್ತಾರವಾಗಿದ್ದು ಭವಿಷ್ಯದ ಬಗ್ಗೆ ಅಚ್ಚಳಿಯದ ನಂಬುಗೆಯನ್ನು ಸೂಚಿಸುವುದು ಗಮನಾರ್ಹ. ಹಾಗೆಯೆ ಶ್ರೀಯವರಿಗೆ ಈ ಆತ್ಮೀಯತೆ, ಪ್ರೀತಿಗಳು "ಇನ್ನುಡಿ" ಯಾಗಿವೆ–ಇನಿದಾದ ಸವಿಯಾದ ಮಾತೇ ಇನ್ನುಡಿ. ಈ ಪದವೂ ಮುಂದೆ ಬರುವ 'ಗೆಲುವು' ಎಂಬ ಪದವೂ ಶ್ರೀಯವರ ಕೈಯಲ್ಲಿ ವಿಶಾಲಾರ್ಥವನ್ನು ಪಡೆದುಕೊಂಡಿರುವುದು ಗಮನಾರ್ಹ.

ಅಲ್ಲಿಗೆ ಶ್ರೀಯವರು ಬಂದುದು ಕನ್ನಡದ 'ಬಂಟ'ನಾಗಿ, ಆದರೆ ಆದುದು "ನಾನಿಮ್ಮ ನಂಟನಾದೆನು" ಅವರ ಆತ್ಮೀಯ ವಿಶ್ವಾಸದಿಂದ. ಆದುದರಿಂದ ಕನ್ನಡ ತಾಯಿಯನ್ನು ಎಲ್ಲೆಡೆಯೂ–"ದೆಸೆಯೆಂಟ" ಎಂಟು ದಿಕ್ಕುಗಳಲ್ಲಿಯೂ

ಮೆರಸೋಣ ಬನ್ನಿರೆಂದು ಈ "ಇನ್ನುಡಿ"ಯು ನಂಟರನ್ನು ಈ ಕನ್ನಡದ ಬಂಟ ಕರೆಯುತ್ತಾರೆ. ಈ ತರುಣರ ತಂಡ ಮಾಡಿದ ಕೆಲಸವೇನೂ ಸಾಮಾನ್ಯವಲ್ಲ. ಮುಂದಿನ ಆರು ಸಾಲಿನಲ್ಲಿ ಅವರ ಸಾಧನೆಯ ಚಿತ್ರ ಚೊಕ್ಕವಾಗಿ ಮೂಡಿ ಬಂದಿದೆ. ಕನ್ನಡತನವನ್ನೆಲ್ಲಕಡೆಯೂ ಪಸರಿಸಿ, ಜನರಲ್ಲಿ ಎಚ್ಚರವನ್ನು ಮೂಡಿಸುವ ಮಹತ್ಕಾರ್ಯ ೧೯೩೭ರಲ್ಲಿ ಅತ್ಯಗತ್ಯವಾಗಿತ್ತೆಂಬುದನ್ನು ನಾವು ಇಲ್ಲಿ ನೆನೆಯಬೇಕು. ಕನ್ನಡನಾಡಿನ ಜನ ಎಲ್ಲೆಲ್ಲೂ ಹಲವಾರು ನಿರ್ಬಂಧಗಳಿ ಗೊಳಗಾಗಿದ್ದ ಕಾಲ ಅದು. ಹರಿದುಹಂಚಿಹೋಗಿದ್ದ ಈ ಜನಕ್ಕೆ ಪರಿಸರದ ಕೋಟಲೆ ಒಂದು ಕಡೆ–ಹೈದರಾಬಾದಿನವರಿಗಂತೂ ರಾಜಕೀಯ, ಸಾಮಾಜಿಕ ಹಾಗೂ ಭಾಷೆಯ ದಿಗ್ಬಂಧನವಿತ್ತು ಎಂಬುದರ ಹಿನ್ನೆಲೆಯಲ್ಲಿ ನೋಡಿದಾಗ, ೧೯೩೭ರ ಐತಿಹಾಸಿಕ ಸ್ಥಿತಿಯನ್ನು ನೆನೆದಾಗ ಅವರ 'ಕನ್ನಡಿಗತನದ' ಕೆಲಸದ ಹಿರಿಮೆ ಅರಿವಾಗುತ್ತದೆ.

ಶ್ರೀಯವರು ಒಂದನ್ನು ಚೆನ್ನಾಗಿ ಅರಿತವರಾಗಿದ್ದು ಈ ಕಾಲದ ಸಾಧನೆ ಯನ್ನು ಮೆಚ್ಚಿ ಹೊಗಳಿದರು! ಈಗ ಕರ್ನಾಟಕ ಒಂದಾದುದು, ಆಗ ಈ ಬಗೆಯಲ್ಲಿ ದುಡಿದುದರಿಂದಲೇ ಎಂಬುದನ್ನು ಮರೆಯಲಾಗದು!

ಬೇರೆ ಭಾಷೆಯ ಪ್ರದೇಶಕ್ಕೆ ಹೋಗಿಬಂದವನಿಗೆ ಮಾತ್ರ ತನ್ನ ತಾಯಿ ನುಡಿಯ ಬೆಲೆ ಅರಿವಾಗುವುದಂತೆ. ಬೇರೆ ಭಾಷಾಪ್ರದೇಶದಲ್ಲಿದ್ದು, ರಾಜ ಕೀಯ ಕಾರಣಗಳಿಗಾಗಿ ತನ್ನ ತಾಯಿನುಡಿಯ ಮೇಲೆ ನಡೆಯುವ ದಬ್ಬಾಳಿಕೆ ಯನ್ನು, ಅದಕ್ಕೊದಗಿದ ದುಃಸ್ಥಿತಿಯನ್ನು ಕಂಡು ಅನುಭವಿಸಿದವನಿಗೆ ತಾಯಿ ನುಡಿಯ ಸೊಗಸು ತೀವ್ರವಾಗಿ ಭಾವೋದ್ರೇಕಕ್ಕೆ ಒಯ್ಯುವುದು ಬಹಳ ಸಹಜ. ಆ ಭಾವನೆಯನ್ನು ಚೆನ್ನಾಗಿ ಅರ್ಥಮಾಡಿಕೊಂಡ ಶ್ರೀಯವರು ಮುಂದಿನ ಸಾಲುಗಳಲ್ಲಿ ಇಲ್ಲಿನ ಕನ್ನಡ ಜನದ ಕನ್ನಡ ಪ್ರೇಮವನ್ನು ಹಾಡಿ ಹೊಗಳಿದ್ದಾರೆ.

ಕನ್ನಡಿಗತನದ ಬಾವುಟದ ಕುಡಿಯ ಕಟ್ಟಿ "ತಾಯಿಗಿಟ್ಟರಿ ಹೊನ್ನ ಮುಡಿಯು" ಎಂದು ಮೆಚ್ಚಿದ್ದಾರೆ. ದೂರದ ಈ ನಂಟರು ಈ ಪಾವನತೆಯನ್ನು ಸಾಧಿಸಿದಾಗ "ಮನಸು ನಿಲಲಾರದೆಯೆ ನಾನೋಡಿಬಂದೆ" ಎಂದು ಶ್ರೀಯವರು ಓಡೋಡಿ ಬಂದುದನ್ನು ತಮ್ಮ ಮನಸ್ಸು ಅಲ್ಲಿಯವರ ಪ್ರೀತಿ ವಿಶ್ವಾಸಕ್ಕೆ ಮಣಿದು, ಕನ್ನಡತನಕ್ಕೆ ಓಗೊಟ್ಟು ತಮ್ಮನಿಲ್ಲಿಗೆ ಕರೆತಂದಿತೆಂದು ಬಹು ಸೊಗಸಾಗಿ ಹೇಳಿಕೊಂಡಿದ್ದಾರೆ. ಅಷ್ಟೇ ಅಲ್ಲ ಇಲ್ಲಿ "ಮೊಗ್ಗು ಮಾಲೆಯನಿಲ್ಲಿ ನಾ ನೋಡಿಬಂದೆ" ಎಂದು ಶ್ಲೇಷೆಯನ್ನುಪಯೋಗಿಸಿ ತಮ್ಮ ಮನಸ್ಸಿನ ಆನಂದ

ಸೂಚಿಸಿದ್ದಾರೆ. ಮೊಗ್ಗು ಮಾಲೆಯನ್ನು ಅಲ್ಲಿ ನೋಡಿ, ಅಲ್ಲಿಗೆ ಓಡಿಬಂದರು. ಆಗ ಈ ಜನ ಕನ್ನಡಿಗತನದ ಈ ಮೊಗ್ಗಿನ ಮಾಲೆಯನ್ನು ಬೆಳಗಿಸಿದರು—ಎಲ್ಲ ಸೇರಿದ ಪರಿಸೆಯಲ್ಲಿ. ಆಗ ಮತ್ತೆ ಆ ನಾಡಿನ ಬಗ್ಗೆ ಶ್ರೀಯವರಿಗೆ ಹೆಮ್ಮೆ ಗೌರವ ತಲೆದೋರಿ ಅದನ್ನು, ಅಲ್ಲಿನ ಕನ್ನಡತನವನ್ನು, ಕನ್ನಡ ಜನರನ್ನು ಮೆಚ್ಚಿಕೊಂಡಿದ್ದಾರೆ-ಮನಸ್ಸು ತುಡಿದು ನುಡಿಯುತ್ತಾರೆ-ಕನ್ನಡತನದ ಪಾವನ ಗಂಗೆಯುಕ್ಕುವ ಈ ನಾಡು "ಕಾಶಿ ಕನ್ನಡಿಗನಿಗೆ". ಇಲ್ಲಿ "ಕನ್ನಡದ ಹೊಳೆಗೆ ತಲೆಮೂಡು"ತ್ತಿದೆ-ಅಂತೆಯೇ ಕನ್ನಡತನ ಸಾಧಿಸಿದ ಈ ಹಿರಿಯರ ಬೀಡು—ಇತಿಹಾಸದಲ್ಲಿ ಇವೆಲ್ಲ ಕನ್ನಡನಾಡಿನ ಭಾಗವಾಗಿದ್ದು-ಹೈದರಾಬಾದು ಮುಂತಾದ ಜಾಗಗಳು ಕನ್ನಡದ ನೆಲದ ಕಿರೀಟವಾಗಿದ್ದುದನ್ನು ಶ್ರೀಯವರು ಇಲ್ಲಿ ನೆನೆದಿರುವುದು ಸೂಚ್ಯವಾಗಿ ಬಂದಿದೆ. ಈ ನಾಡನ್ನು ಹಿರಿಮೆಗೊಳಿಸಿದ ಪೂರ್ವದ ಕನ್ನಡಿಗರ ತೇಜದ ಬೀಜ ನೆಲದಲ್ಲಿ ಹುದುಗಿಹೋಗಿತ್ತು. ಈಗ ವಿಶ್ವಾಸ, ಪ್ರೀತಿಗಳ ಮಳೆಗರೆದಿದೆ. ಮಳೆ ನೆಲಕ್ಕೆ ಎರೆದ ಅಮೃತದಿಂದ ಈ ತೇಜೋಬೀಜಗಳು ಮೊಳಕೆಯೊಡೆದಿವೆ—ಹೂತುಹೋಗಿದ್ದ ಕನ್ನಡತನ ಈಗ ಮೊಗ್ಗಾಗಿ ಮೂಡಿದೆ ಹೂವಾಗಿ ಅರಳಿದೆ—ಎಂಬ ಕಲ್ಪನೆ ಮುಂದಿನ ಸಾಲುಗಳಲ್ಲಿ ಚಿಕ್ಕ ಚೊಕ್ಕ ಮಾತುಗಳಲ್ಲಿ ರೂಪಿತವಾಗಿದೆ. ಹಿರಿಯರ ತೇಜ ನೆಲವನ್ನು ಬಿರಿದುಕೊಂಡು ಕುಡಿಯಿಟ್ಟು, ಬಳ್ಳಿಯಾಗಿ ಹಬ್ಬಿದೆ-ಮೊಗ್ಗು ಜೊಂಪೆ ಜೊಂಪೆಯಾಗಿ ಕಾಣಿಸಿಕೊಂಡಿದೆ-ಅಂತೆಯೇ ಇದು "ಮೊಗ್ಗೆ ಹೂ ಬೀಡು !"-ಈ ಮೊಗ್ಗುಗಳು ಅರಳಿ ಎಚ್ಚತ್ತರೆ-ಅದೊ "ಬೆಳ್ಳಿ ಮೂಡು !"-ಮೈಸೂರು ಮಲ್ಲಿಗೆಯ ರಾಶಿ ಬೆಳ್ಳಿಯ ಮೂಡಿನಂತೆ ಶ್ರೀಯವರ ಮನಸ್ಸಿನ ಅಂತರಾಳದಲ್ಲಿದ್ದು, ಈ ಸಾಲುಗಳಲ್ಲಿ ಮೂಡಿಬಂದಿದೆ. ಈ ಮೊಗ್ಗಿನ ಮಾಲೆ ಕನ್ನಡಿಗತನದ ಹೂವನ್ನು ಮೂಡಿಸುವ ರೀತಿ ಶ್ರೀಯವರ ಮನಸ್ಸಿನಲ್ಲಿ ಊರಿದೆ.

ಅಂತೆಯೇ ಕೊನೆಯಲ್ಲಿ ಅವರೆಲ್ಲರ ಪ್ರೀತಿ ವಾತ್ಸಲ್ಯಗಳಿಗೆ ಮಾರುಹೋದ ಶ್ರೀಯವರು "ನನ್ನನ್ನು ಮುನ್ನುಡಿಯನ್ನು ಕೇಳುತ್ತಿರುವರಲ್ಲ. ಗೆಳೆಯರೇ" ಎಂದು ಪ್ರಶ್ನಿಸಿ ನೀವೆಲ್ಲ "ಇನ್ನುಡಿಯ ಹಾಡಿಸಿರಿ" ಇನಿದಾನ ನುಡಿಯನ್ನು ಹಾಡಿ, ಶ್ರೀಯವರಿಗೆ ಮೆಚ್ಚಿತ್ತು ಗೌರವಿಸಿದ ಈ ಜನರಿಗೆ ಶ್ರೀಯವರು ಏನು ತಾನೇ ಹೇಳಲು ಸಾಧ್ಯ—"ಸವಿನೆನಪನಲ್ಲದೇ ನುಡಿವೆನೇನನ್ನ ?"—ಸವಿನೆನಪೇ ತುಂಬಿಕೊಂಡ ಮನಸ್ಸಿನಿಂದ. ಮುನ್ನುಡಿಯ ರೂಪದಲ್ಲಿ ಅದೇ ತುಳುಕಿದೆ.

ಈ ಮುನ್ನುಡಿಯನ್ನು ನಾವು ವೀಕ್ಷಿಸಿದಾಗ ಶ್ರೀಯವರಿಗೆ ಕನ್ನಡ ಜನರ ಬಗ್ಗೆ ಇದ್ದ ಪ್ರೀತಿ, ಕನ್ನಡ ಜನರು ಶ್ರೀಯವರ ಬಗ್ಗೆ ತೋರಿದ ಆದರ ಗೌರವ,

ಕನ್ನಡದ ಕೆಲಸಕ್ಕಾಗಿ ತನ್ನನ್ನು ತಾನೇ ಬಂಟ ಎಂದು ಕರೆದುಕೊಳ್ಳುವ ಸೌಜನ್ಯದ ಕಳಕಳಿ, ಕನ್ನಡದವರೆಲ್ಲ ತಮಗೆ ನಂಟರು ಎಂಬ ಹಾರ್ದಿಕತೆ ಇವೆಲ್ಲ ಸ್ಪಷ್ಟವಾಗಿ ಕಾಣುತ್ತವೆ. ಇದು ಶ್ರೀಯವರ 'ಕನ್ನಡತಾಯ್ ನೋಟ' ದಂತಹ ಪ್ರಗಾಥದ ಜತೆಗೇ ಸರಿಸಮನಾಗಿ ನಿಲ್ಲುವ ಪ್ರಗಾಥ ಎನ್ನಬಹುದು.

ಕುಂದಗೋಳದ ತಾರೆಯು ಬಳಗದವರು ಪ್ರಕಟಿಸಿದ 'ಹೂ' ಫ್ಲಾಲ್ಸ್‌ಕೇಪ್ ಆಕಾರದ ಅಷ್ಟದಳದ ೭೬ ಪುಟಗಳ ಪುಟ್ಟ ಪುಸ್ತಕ. ಹೊದಿಕೆಯ ಮೇಲಿರುವ ಚಿತ್ರ ಬಣ್ಣ ಬಣ್ಣದ ಅಲಂಕಾರ ಪಡೆಯದ ಸರಳ ಸುಂದರ ಮೂಡಿಕೆ. ಕೆಳಗೆ ಗಿಡ ಮರಗಳ ನೆರಳು ಅಲ್ಲಿಂದ ಮಧ್ಯ ದೀಪಸ್ಥಂಧ ಎದ್ದು ನಿಂತಿದೆ. ದೀಪಸ್ತಂಭದ ಅಡಿಯಲ್ಲಿ '೧೯೩೭, ತಾರೆಯ ಬಳಗ, ಕುಂದಗೋಳ' ಎಂಬ ಹೆಸರು. ಮೇಲೆ ಪುಟದ ಮೇಲ್ತುದಿಯಯವರೆಗೆ ಸುತ್ತಲೂ ಹರಡಿಕೊಂಡ ತುಪ್ಪಳದ ಬಿಳಿ ಮೋಡಗಳ ಹಿಂದೆ, ಆಕಾಶದಲ್ಲಿ ಅಲ್ಲಲ್ಲಿ ಒಂದೊಂದು ಮಿನುಗುವ ತಾರೆಗಳು. ಪುಟದ ಮೇಲು ಭಾಗದಲ್ಲಿ ಮಧ್ಯಕ್ಕೆ ಸರಿಯಾಗಿ ಐದು ಮೂಲೆಗಳ ನಕ್ಷತ್ರದ ಒಳಗೆ ತಾವರೆಯ ಎಲೆಯ ಮೇಲೆದ್ದು ಅರಳಿರುವ ಸಹಸ್ರದಳ ಕೆಂಡಾವರೆ, ಆ ಪದ್ಮದ ಹಿನ್ನೆಲೆಯನ್ನಿಟ್ಟುಕೊಂಡು ಒತ್ತಕ್ಷರದಲ್ಲಿ ಮೂಡಿರುವ 'ಹೂ' ಎಂಬ ಹೆಸರು. ಇದಕ್ಕೆ ಎರಡು ಪುಟಗಳ ಮುನ್ನುಡಿಯನ್ನು ಶ್ರೀಯವರು ಬರೆದಿದ್ದಾರೆ. ಇಲ್ಲಿ ಬರುವ 'ವೆಳ್ಳ' ಪದಕ್ಕೆ ಅಡಿ ಟಿಪ್ಪಣಿ ಕೊಟ್ಟು 'ಚೆಳ್ಳ–ಪ್ರವಾಹ' ಎಂದು ಶ್ರೀಯವರೇ ಬರೆದಿದ್ದಾರೆ. ಈ ಪುಸ್ತಕದ ಪ್ರತಿಗಳು ಬಹಳ ಅಪರೂಪವಾಗಿದ್ದುದರ ಕಾರಣವಾಗಿ, ಹೊದಿಕೆಯ ಚಿತ್ರವನ್ನು ನಾನಿಲ್ಲಿ ವರ್ಣಿಸಿದ್ದೇನೆ. ೧೯೩೭ ರ ಆಗಸ್ಟ್ ತಿಂಗಳಲ್ಲಿ ಪ್ರಕಟವಾದ ಈ 'ತಾರೆಯ ಬಳಗದ' ಕವಿತಾ ಸಂಗ್ರಹ 'ಹೂ'ಗೆ ಶ್ರೀಯವರು ಉತ್ಸಾಹದಿಂದ, ಕುಣಿಕುಣಿಯುವ ಮನಸ್ಸಿನ ಉಲ್ಲಾಸದಿಂದ ಬರೆದ ಮುನ್ನುಡಿಯ ಪೂರ್ಣ ಪಾಠವನ್ನು ಈಗ ನೋಡಬಹುದು.

## ಮುನ್ನುಡಿ

ತಾರೆಯ ಬಳಗದ ತಾಳದ ಕುಣಿತ !
ಕುಂದಗೋಳದ ಕೆಳೆಯರ ಕುಣಿತ !
ಆಟ_ಪಾಟ__
ನೋಟ_ಮಾಟ !
ಚಿಮ್ಮು ಜವ್ವನರ ಹಮ್ಮಿನ ಕುಣಿತ,—
ಅಮ್ಮನ ಭಕ್ತಿಯ ಶಕ್ತಿಯ ಕುಣಿತ,
ಬಾ, ಓ ಜೀವಾ
ಕೈ ಕೈ ಕೋವಾ

ಕರೆದು ಶ್ರೀಯವರ ಸಹಚರರನ್ನು ಕನ್ನಡದ ಕೆಲಸ ಮಾಡುವವರನ್ನು "ಅಮ್ಮನ ಭಕ್ತಿಯ ಭಜನೆಯ ಕೂಟ" ಎಂದು ಅಪಮಾನಿಸುತ್ತಿದ್ದರು. ಶ್ರೀಯವರಿಗೆ ಇದು ತಿಳಿದಿತ್ತು. ಆ ಲೇವಡಿಯ ಮಾತುಗಳನ್ನು ಅವರು ಈ ಮುನ್ನುಡಿಯ ಒಂದು ಸಾಲನ್ನಾಗಿ ಬಳಸಿಕೊಂಡು, ವಿರೋಧಿಗಳ ಕೈಬಾಯಿ ಕಟ್ಟುವಂತೆ ಮಾಡಿದ್ದಾರೆ.

"ನಾವೇ ನಾಡು, ನಾಡೇ ನಾವು" ಎಂಬುವ ಕರೆಯಂತೂ ಅಪೂರ್ವವಾಗಿ ಮಿಂಚಿದೆ. ನಮ್ಮ ಎಲ್ಲವೂ ನಾಡಿಗಾಗಿ, ಮತ್ತು ನಾವೇ ನಾಡು ಎಂಬ ಧೀಮಂತತೆ ಇಲ್ಲಿ ಎದ್ದು ತೋರುತ್ತದೆ. ಇಲ್ಲಿ ಹೆಚ್ಚು ವ್ಯಾಖ್ಯಾನ ಅನಗತ್ಯ. ಆದರೆ ಒಂದು ಅಂಶವನ್ನು-ವಿಶಿಷ್ಟ ಸಂಗತಿಯನ್ನು ಎತ್ತಿ ತೋರಲೇಬೇಕು. "ಗಂಡ್ಸೋರ್, ಎಂಗ್ಸೋರ್ ಜನ್ನಳೈಡೆಗೆ" ಎಂಬ ಸಾಲು ಇದ್ದಕ್ಕಿದ್ದಂತೆ ಮಧ್ಯದಲ್ಲಿ ಬಂದು ರಚನೆಗೆ ವೈವಿಧ್ಯ ಕೊಟ್ಟಿದೆ ಎಂಬುದು ಗಮನಾರ್ಹ. ಅಷ್ಟೇ ಅಲ್ಲದೆ ಆಗತಾನೇ ಶ್ರೀಯವರು ಹೇಳಿದ್ದ "ಜಾನಪದ ಕಾವ್ಯಗಳನ್ನು ಕೂಡಿಸಿ ಪ್ರಕಟಿಸಬೇಕು" ಎಂಬ ಸೂತ್ರದ ನೆನಪು ಮಾಡಿಕೊಡುವ ಗ್ರಾಮ್ಯ ಪ್ರಯೋಗ. ಆದೀಗತಾನೇ ಪ್ರಕಟವಾಗಿದ್ದು ಪ್ರಸಿದ್ಧಿಗೆ ಬರುತ್ತಿದ್ದ "ರತ್ನನ ಪದಗಳು" ಶ್ರೀಯವರ ಮೇಲೆ ಪ್ರಭಾವ ಬೀರಿದ್ದು, ಆ ಮೂಡಿಕೆ ಇಲ್ಲಿ ಗ್ರಾಮ್ಯ ಪದಪುಂಜ-ರತ್ನನಂತೆಯೇ ಬಳಕೆಯಾಗಿದೆ. ಜನರ ಆಡುಮಾತಿನ ಸೊಗಡನ್ನು ತರುವ ಈ ಸಾಲುಗಳಂತೂ ಜಾನಪದದ ಬಗ್ಗೆ ಶ್ರೀಯವರು ಇಟ್ಟುಕೊಂಡಿದ್ದ ಅಭಿಮಾನದ ಪ್ರತೀಕ ಎಂದು ನನ್ನ ಅನಿಸಿಕೆ. ಹಳಗನ್ನಡದ ಪದ 'ವೆಳ್ಳ'ವನ್ನು ಮತ್ತೆ ಬಳಕೆಗೆ ತಂದರು ಶ್ರೀಯವರು. ಈ ಪದವನ್ನು ಮಲೆಯಾಳಿ ಹಾಗೂ ತಮಿಳುಗಳಲ್ಲಿ ಈಗಲೂ ಬಳಸುತ್ತಿರುವುದನ್ನು ಇಲ್ಲಿ ನೆನೆಯಬಹುದು. ಹಳೆಯ ಬಳಕೆಯ ಪದಗಳನ್ನು ಪುನರುಜ್ಜೀವನಗೊಳಿಸಿ ಪ್ರಚಾರಕ್ಕೆ ತರುವುದೂ ಶ್ರೀಯವರ ಯೋಜನೆಯ ಒಂದು ಅಂಗವಾಗಿತ್ತೆಂಬುದನ್ನು ಗಮನಿಸಬೇಕು.

ಈ ಎರಡು ಕವಿತೆಗಳನ್ನು ನಾವು ಕನ್ನಡದ ಇತಿಹಾಸದ ಹಿನ್ನೆಲೆಯಲ್ಲಿ ನೋಡಬೇಕು. ಕನ್ನಡ ಸೊಲ್ಲೆತ್ತಲು ಕಷ್ಟಪಡುತ್ತಿದ್ದ ಕಾಲದಲ್ಲಿ, ಕನ್ನಡ ಬೇಕೇಬೇಕು ಎಂಬ ಪ್ರಚಾರದಲ್ಲಿ ಶ್ರೀಯವರು ತೊಡಗಿದ್ದರು. ಈಗಲೂ ಇನ್ನೂ ಕನ್ನಡಕ್ಕಾಗಿ ಹೋರಾಟ ನಡೆಯುತ್ತಲೇ ಇದೆಯೆಂಬುದನ್ನು ನಾವು ನೆನೆಯಬೇಕು. ಕನ್ನಡವೇ ನಮಗೆ ರಕ್ಷೆ. ಕನ್ನಡವೇ ನಮಗೆ ಮುಕ್ತಿ" ಎಂದು ಕರೆಕೊಟ್ಟ ಶ್ರೀಯವರ ಕಾರ್ಯವಿಸ್ತಾರದಿಂದ ಇಂದು ಕನ್ನಡ ಸಾಹಿತ್ಯಸಮೃದ್ಧಿಯನ್ನು, ಭಾಷಾಸಂಪದವನ್ನು ಪಡೆದುಕೊಂಡಿದೆ. ನಾವು ಇಂದು ಕನ್ನಡವನ್ನು ಎತ್ತರಕ್ಕೆ

ಬೆಳಸಿದ್ದರೆ, ಅದು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಹೆಗಲ ಮೇಲೆ ನಾವು ನಿಂತಿರುವುದರಿಂದ ಎಂಬುದನ್ನು ಮರೆಯುವಂತಿಲ್ಲ. ಅಂತೆಯೇ ಈ ಮುನ್ನುಡಿಗಳು ಉತ್ಸಾಹ ತುಂಬಲು ಆ ಕಾಲಕ್ಕೆ ಅಗತ್ಯವಾಗಿದ್ದುವೆಂಬುದನ್ನು ನಾವು ನೆನಪಿನಲ್ಲಿಡಬೇಕು.

ಶ್ರೀಯವರ ನೂರು ವರ್ಷದ ಹುಟ್ಟುಹಬ್ಬವನ್ನು ಆಚರಿಸುವ ಈ ಕಾಲಕ್ಕೆ ಅವರು ಹಿಂದೆ ಕನ್ನಡವನ್ನು ನೆಲೆ ನಿಲ್ಲಿಸಲು ಮಾಡಿದ ಅಪಾರ ಸೇವೆಯನ್ನು ನಾವು ಕೃತಜ್ಞತೆಯಿಂದ ಸ್ಮರಿಸಬೇಕು. ಶ್ರೀಯವರು ಆಗ ಕನ್ನಡ ಸೇವೆಯನ್ನು ನಿರಂತರವಾಗಿ ನಡೆಸದಿದ್ದರೆ, ಇಂದು ಕನ್ನಡ, ಕರ್ನಾಟಕ ಈಗಿನ ಮೇಲಿನ ಸ್ಥಿತಿಗೆ ಬರುತ್ತಲೇ ಇರಲಿಲ್ಲವೆಂಬುದು ನಿಜ. ಅಂತೆಯೇ ಈ ಪುಟ್ಟ ಲೇಖನ ಶ್ರೀಯವರ ಶತಮಾನೋತ್ಸವದ ಕಾಲದಲ್ಲಿ, ಕನ್ನಡದ ಆಚಾರ್ಯರಿಗೆ ಒಂದು ಸಣ್ಣ ಕಾಣಿಕೆ.

ಎಸ್. ಅನಂತನಾರಾಯಣ




ಉತ್ಸಾಹವಿಲ್ಲದೇ ಯಾರಿಂದಲೂ ಯಾವಾಗಲೂ ಅಮೋಘವಾದುದೇನೂ ಸಾಧಿಸಲ್ಪಟ್ಟಿಲ್ಲ.

—ಎಮರ್ಸನ್

ಬೇರೆಯವರ ಮನೆಗೆ ಒಬ್ಬನೇ ಹೋಗಬೇಕು. ಆಲೋಚನೆಗೆ ಇಬ್ಬರಿರಬೇಕು. ಅನೇಕ ಜನ ಕೂಡಿ ಯುದ್ಧ ಮಾಡಬೇಕು.

—ಭಾಸ

# 'ಶ್ರೀ' ಮತ್ತು ಅಕ್ಷರ ಸಂಸ್ಕರಣ

ಕನ್ನಡ ಬಾವುಟವನ್ನು ಏರಿಸಿ, ಹಾರಿಸಿ. ಶಾರದೆಯ ಉತ್ಸವವನ್ನು ನಾಡ ಮೂಲಮೂಲೆಗೂ ಕೊಂಡೊಯ್ದ 'ಶ್ರೀ' ಅವರಿಗೆ ಉತ್ಸಾಹಭಂಗ ಮಾಡುತ್ತಿದ್ದುದು, ಆಗ ಕನ್ನಡ ನಾಡಿನಲ್ಲಿ ಅಗಾಧ ರೂಪ ತಾಳಿದ್ದ ಅನಕ್ಷರತೆ. ಆ ಪೆಡಂಭೂತ ನಾಶವಾಗುವವರೆಗೆ ಈ ಉತ್ಸವಗಳ ಶ್ರಮ ಸಾರ್ಥಕವಾಗುವುದಿಲ್ಲ ಎಂದು ಮನಗಂಡ ಅವರು ಅಕ್ಷರ ಪ್ರಚಾರ ಕಾರ್ಯಕ್ಕೆ ಪ್ರಾಮುಖ್ಯತೆ ಕೊಟ್ಟರು. ಅವರೇ ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯ ಮೊದಲ ಅಧ್ಯಕ್ಷರೂ ಆದರು. ಅಕ್ಷರ ಪ್ರಚಾರ ಕಾರ್ಯವನ್ನು ಕೈಗೊಂಡಾಗ, ಶೀಘ್ರವಾಗಿ ಕಲಿಯುವವರ ದೃಷ್ಟಿಯಿಂದ ಕಲಿಸುವವರ ದೃಷ್ಟಿಯಿಂದ ಕನ್ನಡ ಲಿಪಿಯಲ್ಲಿ ಕೆಲವು ಬದಲಾವಣೆಗಳು ಅಗತ್ಯ ಎಂಬುದು ಅವರಿಗೆ ಅರಿವಾಯಿತು. ಅನೇಕ ವರ್ಷಗಳ ಹಿಂದೆಯೇ ಅವರು ಈ ವಿಷಯವನ್ನು ಪರಿಶೀಲಿಸಿದ್ದರು. ಲಿಪಿಯಲ್ಲಿ ಸಣ್ಣಪುಟ್ಟ ಬದಲಾವಣೆ ಮಾಡಿದರೆ ಈ ಕ್ಲಿಷ್ಟತೆಯನ್ನು ಹೋಗಲಾಡಿಸುವುದರ ಜೊತೆಗೆ ಬೆರಳಚ್ಚುಯಂತ್ರ ತಯಾರಿಸಲೂ ಅನುಕೂಲವಾಗುವುದೆಂದು ಅವರು ನಂಬಿದ್ದರು.

ಕನ್ನಡ ಮುದ್ರಾಕ್ಷರಗಳಲ್ಲಿ ಆಗಬೇಕಾದ ತಿದ್ದುಪಾಟುಗಳನ್ನು ಕುರಿತು ಸಲಹೆ ಮಾಡುವುದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ೧೯೩೬ರಲ್ಲಿಯೇ ಒಂದು ಉಪಸಮಿತಿಯನ್ನು ರಚಿಸಿತು. ಆ ಉಪಸಮಿತಿ ವಿದ್ಯಾ ಇಲಾಖೆಗಳ ಮತ್ತು ಮುದ್ರಣಾಲಯಗಳ, ವಿದ್ವಾಂಸರ ಸಲಹೆಗಳನ್ನು ಪಡೆದು, ೧೯೩೬ನೆಯ ಮೇ ತಿಂಗಳಲ್ಲಿ ಒಂದು ಸಮ್ಮೇಳನ ನಡೆಸಿತು. ಆ ಸಮ್ಮೇಳನ ಈ ವಿಷಯವನ್ನು ಪರಿಶೀಲಿಸಿ ೧೨ ನಿರ್ಣಯಗಳನ್ನು ಅಂಗೀಕರಿಸಿತು. ಈ ಸಮ್ಮೇಳನಕ್ಕೂ 'ಶ್ರೀ' ಅವರೇ ಅಧ್ಯಕ್ಷರಾಗಿದ್ದು ಮಾರ್ಗದರ್ಶನ ಮಾಡಿದರು. ಈ ಅಕ್ಷರ ಸಂಸ್ಕರಣ ಅವರ ಹೆಬ್ಬಯಕೆಗಳಲ್ಲಿ ಒಂದು.

ಅನೇಕ ವರುಷಗಳಿಂದ ಬಳಕೆಯಲ್ಲಿರುವ ಕನ್ನಡ ಲಿಪಿಯಲ್ಲಿ ಬದಲಾವಣೆ ಮಾಡಲು ಹೆಚ್ಚು ವಿರೋಧವೇ ಕಂಡುಬಂದುದರಿಂದ ಆ ನಿರ್ಣಯಗಳು ಬರಿಯ ನಿರ್ಣಯಗಳಾಗಿಯೇ ಉಳಿದಿದ್ದುವು. 'ಶ್ರೀ' ಅವರು ಅಕ್ಷರ ಪ್ರಚಾರ ಕಾರ್ಯವನ್ನು ಕೈಗೊಂಡಾಗ ಈ ವಿಷಯವನ್ನು ಮತ್ತೆ ಕೈಗೆತ್ತಿಕೊಂಡರು.

ಹತ್ತು ವರುಷಗಳ ನಂತರ ಈ ವಿಚಾರವನ್ನು ಮುಂದುವರಿಸಿ, ಸಂಸ್ಕರಣವಾದ ಲಿಪಿಯನ್ನು ಜಾಗ್ರತೆಯಾಗಿ ಬಳಕೆಗೆ ತರುವ ಉದ್ದೇಶದಿಂದ ಮೈಸೂರು

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಒಂದು ಉಪ ಸಮಿತಿಯನ್ನು ರಚಿಸಿ, ಅದಕ್ಕೆ ಈ ಕೆಲಸವನ್ನು ಒಪ್ಪಿಸಿದರು. ಆ ಉಪಸಮಿತಿ ಡಾ|| ಬಿ. ಕುಪ್ಪುಸ್ವಾಮಿಯವರ ಕಾರ್ಯದರ್ಶಿತ್ವದಲ್ಲಿ ಒಂದು ಸಂಸ್ಕರಣ ಯೋಜನೆಯನ್ನು ರಚಿಸಿತು. ೧೯೪೬ ರಲ್ಲಿ ವಿದ್ಯಾ ಇಲಾಖಾ ಮುಖ್ಯಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನೆಡೆದ ಒಂದು ಸಮ್ಮೇಳನ ಈ ವಿಷಯವನ್ನು ಚರ್ಚಿಸಿ, ಇದನ್ನು ಕೂಲಂಕಷವಾಗಿ ಪರಿಶೀಲಿಸಲು ಇನ್ನೊಂದು ಉಪಸಮಿತಿಯನ್ನು ರಚಿಸಿತು.

ಆ ಉಪಸಮಿತಿಯ ಸಲಹೆಯಂತೆ ಮತ್ತು ಮಹಾಜನಗಳಿಂದ ಒಪ್ಪಿಗೆ ಪಡೆದ ನಿರ್ಣಯಗಳಂತೆ ಕನ್ನಡ ಲಿಪಿಯಲ್ಲಿ ಬದಲಾವಣೆಗಳನ್ನು ಮಾಡಿ, ವಯಸ್ಕರ ಶಿಕ್ಷಣ ಸಮಿತಿ, ತಾವು ಪ್ರಕಟಿಸುತ್ತಿರುವ 'ಪುಸ್ತಕ ಪ್ರಪಂಚ' ಮಾಸಪತ್ರಿಕೆಯಲ್ಲಿ ಕೆಲವು ಲೇಖನಗಳನ್ನು ಪ್ರಕಟಿಸಿತು. ಪುಟದ ಎಡಭಾಗದಲ್ಲಿ, ಈಗ ಬಳಕೆಯಲ್ಲಿರುವ ಲಿಪಿಯಲ್ಲಿಯೂ ಬಲಭಾಗದಲ್ಲಿ ಸಂಸ್ಕರಣವಾದ ಲಿಪಿಯಲ್ಲೂ ಲೇಖನಗಳನ್ನು ಅಚ್ಚುಮಾಡಿಸಿ ಪ್ರಚಾರಮಾಡಿತು.

ಆಗ ಅನುಸರಿಸಿದ ಬದಲಾವಣೆಗಳು ಮತ್ತು ಅವುಗಳಿಗೆ ಆಧಾರವಾದ ನಿರ್ಣಯಗಳು ಹೀಗಿವೆ:

೧. ಈಗ ಇರುವ ಅ, ಇ, ಉ, ಎ, ಒ—ಈ ಹ್ರಸ್ವಸ್ವರಗಳನ್ನು ಇಟ್ಟುಕೊಂಡು ಅವಕ್ಕೆ ಪಕ್ಕದಲ್ಲಿ ದೀರ್ಘ ಚಿಹ್ನೆಯನ್ನು (ೀ) ಕೊಟ್ಟು ದೀರ್ಘ ಸವರ್ಣಗಳನ್ನಾಗಿ ಮಾಡಿಕೊಳ್ಳತಕ್ಕದ್ದು. ಉದಾ: ಅೀ = ಆ, ಇೀ = ಈ, ಉೀ = ಊ.

೨. ಐ, ಔ, ಗಳೂ, ಅನುಸ್ವಾರ ವಿಸರ್ಗಗಳು, ಈಗ ಇರುವಂತೆಯೆ ಇರತಕ್ಕದ್ದು.

೩. ವರ್ಗೀಯ ವ್ಯಂಜನಗಳಲ್ಲಿ ಹತ್ತು ಮಹಾಪ್ರಾಣಾಕ್ಷರಗಳನ್ನು ತೆಗೆದುಹಾಕಿ, ಅವುಗಳನ್ನು ಆಯಾ ಅಲ್ಪಪ್ರಾಣಗಳಿಗೆ ಮಹಾಪ್ರಾಣ ಚಿಹ್ನೆಯಾದ ಹೊಕ್ಕುಳು ಶೀಳು ಅಥವಾ ಅಕ್ಷರದ ಮುಂದೆ ಈ ( , ) ಗುರುತು ಹಾಕುವುದರಿಂದಲೇ ಸೂಚಿಸತಕ್ಕದ್ದು. ಉದಾ: ಕ, = ಖ, ಗ, = ಘ.

೪. ಹತ್ತು ಅಲ್ಪಪ್ರಾಣಗಳೂ ಐದು ಅನುನಾಸಿಕಗಳೂ ಈಗ ಇರುವಂತೆಯೇ ಇರತಕ್ಕದ್ದು.

೫. ಯ, ರ, ಲ, ವ, ಶ, ಷ, ಸ, ಹ, ಳ—ಇವಿಷ್ಟೂ ಈಗ ಇರುವಂತೆಯೇ ಇರತಕ್ಕದ್ದು.

೬. ಸಂಯುಕ್ತಾಕ್ಷರವನ್ನು ಬರೆಯುವಾಗ ಉಚ್ಚಾರಣೆಗನುಸಾರವಾಗಿ ಅಕ್ಷರಗಳನ್ನು ಉಪಯೋಗಿಸಿ ಬರೆಯತಕ್ಕದ್ದು. ಉದಾ: ಪುಸ್‌ತಕ ಪ್‌ರಪಂಚ= ಪುಸ್ತಕ ಪ್ರಪಂಚ.

ಈ ಬದಲಾವಣೆಗಳನ್ನು ಅಳವಡಿಸಿ ಬರೆದ ಬರೆಹ ಹೇಗಿರುತ್ತದೆ ಎಂಬುದನ್ನು ಇಲ್ಲಿ ನೋಡಬಹುದು. ಅಲ್ಪಪ್ರಾಣಾಕ್ಷರಗಳಿಗೆ ಹೊಕ್ಕುಳು ಸೀಳಿ ಮಹಾಪ್ರಾಣ ಮಾಡಿದ ಅಕ್ಷರ ಮೊಳೆಗಳು ಮುದ್ರಣಾಲಯದಲ್ಲಿ ದೊರೆಯದೇ ಇರುವುದರಿಂದ ಈಗ ಬಳಕೆಯಲ್ಲಿರುವ ಮಹಾಪ್ರಾಣಾಕ್ಷರಗಳನ್ನೇ ಇಲ್ಲಿ ಬಳಸಿದೆ.

ಈಗ ಬಳಕೆಯಲ್ಲಿರುವ ಲಿಪಿಯಲ್ಲಿ :

"ಪುಸ್ತಕಗಳನ್ನು ಚುನಾಯಿಸತಕ್ಕ ಭಂಡಾರದ ಅಧಿಕಾರಿ ಆ ಪುಸ್ತಕಗಳನ್ನು ಓದುವವರು ಯಾರು ಎಂಬುದನ್ನು ನೆನಪಿನಲ್ಲಿಡಬೇಕು. ಅವರಿಗೆ ಬೇಕಾದ ಮತ್ತು ಅರ್ಥವಾಗುವ ಪುಸ್ತಕಗಳನ್ನೇ ಆರಿಸಬೇಕು. ತಾನೇ ಓದಿ ಜನರಿಗೆ ಅರ್ಥ ಹೇಳಿ ತಿಳಿಸಲು ಸಾಧ್ಯವಿದ್ದರೆ ಮಾತ್ರ ಕಠಿನವಾದ ಕೆಲವು ಪುಸ್ತಕಗಳನ್ನೂ ತರಿಸಬಹುದು."

ಸಂಸ್ಕರಣವಾದ ಲಿಪಿಯಲ್ಲಿ :

"ಪುಸ್‌ತಕಗಳನ್‌ನು ಚುನೇಯಿಸತಕ್‌ಕ ಭಂಡೇರದ ಅಧಿಕೇರಿ ಅೇ ಪುಸ್‌ತಕಗಳನ್‌ನು ಒೇದುವವರು ಯೇರು ಎಂಬುದನ್‌ನು ನೆನಪಿನಲ್‌ಲಿಡಬೇಕು. ಅವರಿಗೆ ಬೇಕೇದ ಮತ್‌ತು ಅರ್‌ಥವೇಗುವ ಪುಸ್‌ತಕಗಳನ್‌ನೇ ಅೇರಿಸಬೇಕು. ತೇನೇ ಒೇದಿ ಜನರಿಗೆ ಅರ್‌ಥ ಹೇಳಿ ತಿಳಿಸಲು ಸೇಧ್‌ಯವಿದ್‌ದರೆ ಮೇತ್‌ರ ಕಠಿನವೇದ ಪುಸ್‌ತಕಗಳನ್‌ನೂ ತರಿಸಬಹುದು."

'ಪುಸ್ತಕ ಪ್ರಪಂಚ' ಪತ್ರಿಕೆಯಲ್ಲಿ ಅಚ್ಚು ಮಾಡುವುದೊಂದಕ್ಕೇ ಈ ಪ್ರಯೋಗ ಸೀಮಿತವಾಗಿರಲಿಲ್ಲ. ಸಂಸ್ಕರಣವಾದ ಲಿಪಿಯ ಒಂದು ಬೆರಳಚ್ಚು ಯಂತ್ರವನ್ನು ಒಬ್ಬ ತಜ್ಞರಿಂದ ತಯಾರಿಸಿ, ಅದನ್ನು ಬಳಸಿ ನೋಡಲಾಯಿತು. ಹೊಸ ಲಿಪಿಯಲ್ಲಿ 'ಅಕ್ಷರ ಕಲಿಯುವ ಪುಸ್ತಕ'ದ ಕೆಲವು ಪ್ರತಿಗಳನ್ನು ಅಚ್ಚು ಮಾಡಿಸಿ, ಪ್ರಾಯೋಗಿಕವಾಗಿ ವಯಸ್ಕರ ಶಾಲೆಯನ್ನೂ ನಡಸಲಾಯಿತು.

ಈ ಪ್ರಯೋಗಗಳು ನಡೆಯುತ್ತಿರುವಾಗಲೇ ಜನತೆಯ ಪ್ರೋತ್ಸಾಹಕ್ಕಿಂತ ವಿರೋಧವೇ ಹೆಚ್ಚಾಗಿ ಕಂಡುಬಂತು. ಕೆಲವು ಮಂದಿ ಪಾಶ್ಚಾತ್ಯ ತಜ್ಞರು

'ಕನ್ನಡ ಲಿಪಿ ತುಂಬ ಸುಂದರವಾಗಿದೆ, ಅದನ್ನು ಇರುವ ಹಾಗೆಯೇ ಉಳಿಸಿಕೊಳ್ಳುವುದು ಸೂಕ್ತ' ಎಂದು ಸೂಚಿಸಿದರು. ಇನ್ನು ಕೆಲವರು 'ಯಂತ್ರ ಸೌಲಭ್ಯಕ್ಕಾಗಿ ಲಿಪಿಯನ್ನೇ ವಿರೂಪಗೊಳಿಸುವುದು ಸರಿಯಲ್ಲ; ಲಿಪಿಗೆ ಸರಿಯಾದ ಯಂತ್ರವನ್ನು ತಯಾರಿಸುವುದು ಒಳ್ಳೆಯದು' ಎಂದೂ ಅಭಿಪ್ರಾಯಪಟ್ಟರು. ಒತ್ತಕ್ಷರ ಬಂದಲ್ಲೆಲ್ಲ ಅರ್ಧಾಕ್ಷರಗಳ ಬಳಕೆ ಹೆಚ್ಚಾಗಿರುವುದನ್ನು ಗಮನಿಸಿ ಕೆಲವರು ವಿನೋದಕ್ಕಾಗಿ 'ಕನ್ನಡ ಉಗ್ಗು ಭಾಷೆ ಆಯಿತು' ಎಂದದ್ದೂ ಉಂಟು. ಆದ್ದರಿಂದ ಅಕ್ಷರ ಸಂಸ್ಕರಣದ ಕಾರ್ಯವನ್ನು ಅಲ್ಲಿಗೇ ನಿಲ್ಲಿಸಲಾಯಿತು.

ಆದರೆ, ಈ ವಿಷಯವನ್ನು ಪರಿಶೀಲಿಸುವಾಗ, ಕನ್ನಡ ಲಿಪಿಯನ್ನು ಸರಳಗೊಳಿಸಿಯಾದರೂ ಕನ್ನಡಿಗರನ್ನೆಲ್ಲ ಬೇಗ ಅಕ್ಷರಸ್ಥರನ್ನಾಗಿ ಮಾಡಬೇಕು ಎಂಬ ಕಳಕಳಿ 'ಶ್ರೀ' ಅವರಿಗೆ ಅಗಾಧವಾಗಿತ್ತು ಎಂಬುದು ಗೊತ್ತಾಗುತ್ತದೆ.

ರಾ. ವೆಂ. ಶ್ರೀನಿವಾಸಮೂರ್ತಿ



ಎಷ್ಟೇ ಸಂಪದ್ಭರಿತ ರಾಜ್ಯವಾದರೂ ಅವಿವೇಕಿಯೂ ಅನ್ಯಾಯದಲ್ಲಿ ನಿರತನೂ ಆದ ರಾಜನಿಂದ ನಾಶಹೊಂದುವರು.

—ವಾಲ್ಮೀಕಿ

ಕೈಲಾದವನು ಮಾಡುತ್ತಾನೆ. ಆಗದವನು ಉಪದೇಶಮಾಡುತ್ತಾನೆ.

—ಬರ್ನಾರ್ಡ್‌ಷಾ

ಲೋಕದಲ್ಲಿ ವಿಷಯವನ್ನು ತಿಳಿದುಕೊಳ್ಳುವವರು ವಿರಳ. ವಿಷಯವನ್ನು ತಿಳಿದು ವಿವರಿಸತಕ್ಕವರು ಇನ್ನೂ ವಿರಳ.

—ಭಾರವಿ

# ಬಿಎಂಶ್ರೀ ಅವರ ಭಾಷಣಗಳು ಮತ್ತು ಲೇಖನಗಳು

ಮುನ್ನುಡಿ ಮತ್ತು ವಿಮರ್ಶೆ ಬರಹಗಳನ್ನೂ ಒಳಗೊಂಡಂತೆ ಬಿಎಂಶ್ರೀ ಅವರ ಭಾಷಣಗಳು ಹಾಗೂ ಲೇಖನಗಳಲ್ಲಿ ಹೆಚ್ಚಿನವು 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಗ್ರಂಥದಲ್ಲಿಯೂ (ಪ್ರಕಾಶಕರು : ಕಾವ್ಯಾಲಯ, ಮೈಸೂರು) ಇನ್ನು ಕೆಲವು 'ಶ್ರೀ ಸಾಹಿತ್ಯ'ದಲ್ಲಿಯೂ (ಪ್ರಕಾಶಕರು: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು) ಸಂಕಲಿತವಾಗಿವೆ. ಕನ್ನಡ ನವೋದಯ ಸಾಹಿತ್ಯದ ಸಿದ್ಧಿ–ಸಾಧನೆಗಳಿಗೆ ಕಾರಣ ಪುರುಷರಾದ 'ಕನ್ನಡದ ಕಣ್ವ' ಶ್ರೀ ಅವರ ಬದುಕು-ಬರಹ, ಧ್ಯೇಯ-ಧೋರಣೆಗಳು ಮತ್ತು ಕನಸು-ಕಾಣ್ಕೆಗಳನ್ನು ಈ ಬರಹಗಳು ಸ್ಫುಟವಾಗಿ ಓದುಗರ ಮುಂದೆ ಇರಿಸುತ್ತವೆ: ಅವರನ್ನು ನಮಗೆ ತೀರಾ ಹತ್ತಿರದವರನ್ನಾಗಿ ಮಾಡುತ್ತವೆ. ಕನ್ನಡನಾಡು–ನುಡಿಗಳಿಗೆ ಸಂಬಂಧಿಸಿದಂತೆ ಇವುಗಳಲ್ಲಿ ಪ್ರತಿಪಾದಿತವಾದ ವಿಚಾರಗಳು ಸದ್ಯದ ಸಂದರ್ಭದಲ್ಲಿಯೂ ವಿಚಾರಾರ್ಹವಾದುದರಿಂದ, ಶ್ರೀ ಅವರ ಭಾಷಣಗಳು ಹಾಗೂ ಲೇಖನಗಳು ಸಾರ್ವಕಾಲಿಕ ಮಹತ್ವ ಹೊಂದಿ, ಮತ್ತೆ ಮತ್ತೆ ಓದತಕ್ಕವಾಗಿವೆ.

ಶ್ರೀ ಭಾಷಣಗಳಲ್ಲಿ ಅತ್ಯಂತ ಪ್ರಮುಖವಾದುವೆಂದರೆ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' (೧೯೨೮) ಹಾಗೂ 'ಕನ್ನಡ ಮಾತು ತಲೆಯೆತ್ತುವ ಬಗೆ' (೧೯೧೧). ಮೊದಲನೆಯ ಭಾಷಣದಲ್ಲಿ ಶ್ರೀ ಅವರು ಕನ್ನಡ ಸಾಹಿತ್ಯದ ಹಿನ್ನೆಲೆಯನ್ನೂ, ಅದು ಸಂಸ್ಕೃತ ಸಾಹಿತ್ಯದಿಂದ ಪಡೆದ ಹಾಗೂ ಇಂಗ್ಲಿಷಿನಿಂದ ಪಡೆಯಬೇಕಾದ ಕೊಡುಗೆಯನ್ನೂ ಕುರಿತು ಚರ್ಚಿಸಿದ್ದಾರೆ, ಎರಡನೆಯದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಗುಣಾವಗುಣಗಳನ್ನು ನಿಷ್ಪಕ್ಷಪಾತವಾಗಿ ಪರಾಮರ್ಶಿಸಿದ್ದಾರೆ: 'ಪುರಾತನ ಜ್ಞಾನಕೋಶವನ್ನು ಮತ್ತೊಮ್ಮೆ ವಿಮರ್ಶಿಸಿ ಜಳ್ಳನ್ನು ತೂರಿ ಕಾಳನ್ನು ಕಣಜಕ್ಕೆ ತುಂಬಿ ಉಂಡು ಮತ್ತೆ ಬಿತ್ತಿ ಹೊಸ ಬೆಳೆಯನ್ನು ನೂರರಷ್ಟು ಹೆಚ್ಚಿಸುವ' ಆಶಯವನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಇವೆರಡೂ ಭಾಷಣಗಳಲ್ಲಿ ಹೊಸಗನ್ನಡ ಸಾಹಿತ್ಯ ವಿಕಾಸಗೊಳ್ಳಬೇಕಾದ ಬಗೆಯನ್ನು ನಿದರ್ಶನ ಪೂರ್ವಕ ವಿವರಿಸಿದ್ದಾರೆ; ಕನ್ನಡಿಗರೆಲ್ಲರೂ ಕನ್ನಡದ ಏಳ್ಗೆಗೆ ಒಮ್ಮನಸ್ಸಿನಿಂದ ದುಡಿಯಲು ಮುಂದೆ ಬರಬೇಕೆಂದು ಕರೆನೀಡಿದ್ದಾರೆ. ಡಾ|| ಸಿ.ಪಿ.ಕೆ. ಹೇಳುವಂತೆ ಈ ಭಾಷಣಗಳಲ್ಲಿ ('ಶ್ರೀ'ಯವರ ಸಾಹಿತ್ಯ,' ಸಾಹಿತ್ಯ ಮನನ, ಪು. ೨) 'ತತ್ಕಾಲಕ್ಕೆ ಅವಶ್ಯವೂ ಸಹಜವೂ ಆಗಿದ್ದ ಪ್ರಚಾರಕನ ಆವೇಶ ತುಸುಮಟ್ಟಿಗೆ ಕಂಡು ಬರುತ್ತದಾದರೂ ಶ್ರೀಯವರ ಮಾತುಗಳು ಬರಿಯ

ಭಾವೋದ್ಗಾರಗಳಾಗದೆ ವೈಚಾರಿಕವಾಗಿದ್ದು ತುಂಬ ಉಪಾದೇಯವಾಗಿವೆ; ಅವರ ಪಾಂಡಿತ್ಯ ಪರಿಶ್ರಮ ದೂರ ದೃಷ್ಟಿ ಜಿಜ್ಞಾಸೆಗಳಿಗೆ ಹಿಡಿದ ಕನ್ನಡಿಯಾಗಿವೆ. ಅವರು ಪ್ರವಾದಿಯಂತೆ ಆಡಿದ ನುಡಿಗಳಲ್ಲಿ ಬಹುಪಾಲು ಸತ್ಯವಾಗಿ ಪರಿಣಮಿಸಿದ್ದರೂ, ಇನ್ನೂ ಆಗ ಬೇಕಾದುದು ಬಹಳಷ್ಟಿದೆ. ಅವರು ಪ್ರಸ್ತಾಪಿಸಿರುವ ಸಮಸ್ಯೆಗಳು ಇಂದಿಗೂ ಇವೆ; ಅಂದಿನ ಪರಿಸ್ಥಿತಿ ಪೂರ್ತಿ ಬದಲಾಗಿಲ್ಲ. ಆದ್ದರಿಂದಲೇ ಶ್ರೀ ಸೂಕ್ತಿಗಳು ಸದಾಕಾಲ ಮನನ ಮಾಡತಕ್ಕುವಾಗಿವೆ.

ಶ್ರೀ ಅವರಿಗೆ ಕನ್ನಡ ಭಾಷೆಯ ಬಗ್ಗೆ, ಅದರ ಪರಿಶುದ್ಧತೆಯ ಬಗ್ಗೆ, ಕನ್ನಡ ಅಧ್ಯಯನವನ್ನು ಸುಲಭಗೊಳಿಸುವ ಬಗ್ಗೆ ಇದ್ದಂತಹ ಆಸಕ್ತಿಯನ್ನು 'ಕನ್ನಡಕ್ಕೆ ಒಂದು ಕಟ್ಟು' ಸ್ಪಷ್ಟಪಡಿಸುತ್ತದೆ. 'ಭಾಷೆಯನ್ನು ಸುಲಭ ಮಾಡಲು ಹೋಗಿ ಅಬದ್ಧ ಮಾಡಬಾರದು' ಎಂದು ನಂಬಿದ ಅವರು 'ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ ಅದರಲ್ಲಿ ಬಿಗಿಯೂ ಕಟ್ಟೂ ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಲು' ನೆರವಾಗುವ ವಿಧಾನವನ್ನು ವಿಪುಲ ಉದಾಹರಣೆಗಳೊಂದಿಗೆ ತಿಳಿಯಪಡಿಸಿದ್ದಾರೆ. ಭಾಷೆಯ ಬಗ್ಗೆ ಅವರಿಗಿದ್ದ ಕಾಳಜಿ 'ಕನ್ನಡದಲ್ಲಿ ಅಕ್ಷರ ಸಂಸ್ಕರಣ' ಎಂಬ ಲೇಖನದಲ್ಲೂ ವ್ಯಕ್ತವಾಗುತ್ತದೆ. ಕನ್ನಡಿಗರ ಹಾಗೂ ಕನ್ನಡ ಭಾಷೆ–ಸಾಹಿತ್ಯಗಳ ಪುರೋಭಿವೃದ್ಧಿಯನ್ನು ಕುರಿತ ಅವರ ಅಭಿಪ್ರಾಯಗಳನ್ನು, ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಸಂಬಂಧಿಸಿದಂತೆ ಅವರು ಮಾಡಿದ ಅನೇಕ ಉಪನ್ಯಾಸಗಳೂ ('ಪರಿಷತ್ತಿನ ಧ್ಯೇಯ', 'ಪರಿಷತ್ತಿನ ಗುರಿಗಳು' ಇತ್ಯಾದಿ) ವಿವಿಧ ಪುಸ್ತಕಗಳಿಗೆ ಅವರು ಬರೆದ ಮುನ್ನುಡಿಗಳೂ ಸ್ಪಷ್ಟಪಡಿಸುತ್ತವೆ.

ಬಿ ಎಂ ಶ್ರೀ ಅವರ ಆಸಕ್ತಿವಲಯದಲ್ಲಿ ಹಳಗನ್ನಡ ಸಾಹಿತ್ಯ, ಹೊಸಗನ್ನಡದ ಪುಸ್ತಕಗಳು, ದ್ರಾವಿಡಭಾಷೆಗಳು, ವಿವಿಧ ಧರ್ಮಗಳು, ಇಂಗ್ಲಿಷ್ ಸಾಹಿತ್ಯ ಹೀಗೆ ಅನೇಕ ವಿಚಾರಗಳು ಸೇರಿವೆ. 'ರುದ್ರನಾಟಕ' ಹಾಗೂ ಪಂಪ–ರನ್ನರು, ನೃಪತುಂಗ, ಚಾಮರಸ, ನಾಗಚಂದ್ರ, ಹೊನ್ನಮ್ಮ, ಕುಮಾರವ್ಯಾಸರೇ ಮೊದಲಾದವರನ್ನು ಕುರಿತ ಶ್ರೀ ಲೇಖನಗಳು ಇಂದಿಗೂ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿವೆ. ಕೌಜಲಗಿ ಶ್ರೀನಿವಾಸರಾಯರು, ಸರ್. ಎಂ. ವಿಶ್ವೇಶ್ವರಯನವರು ಹಾಗೂ ಶ್ರೀಮಾನ್ ವೆಂಕಣ್ಣಯ್ಯನವರ ಬಗ್ಗೆ ಶ್ರೀ ಅವರು ವ್ಯಕ್ತಿಚಿತ್ರಗಳನ್ನೂ ಬರೆದಿದ್ದಾರೆ. ಮಾಸ್ತಿಯವರ 'ಶಾಂತಾ', ಕುವೆಂಪು ಅವರ 'ಕೊಳಲು' ವಿ.ಸೀ. ಅವರ 'ಗೀತಗಳು' ಹಾಗೂ ಕಾರಂತರ 'ಮುಕ್ತದ್ವಾರ'

ಗಳ ಬಗೆಗಿನ ಲೇಖನಗಳು ಶ್ರೀ ಅವರಿಗೆ ಹೊಸ ಗನ್ನಡ ರಚನೆಗಳ ಬಗೆಗಿರುವ ಆಸಕ್ತಿಗೆ ಸಾಕ್ಷ್ಯವಾಗಿವೆ.

ಶ್ರೀ ಅವರ ಲೇಖನ ವ್ಯವಸಾಯ ಕನ್ನಡ ಭಾಷೆಗಷ್ಟೇ ಸೀಮಿತವಾಗಿದ್ದಿಲ್ಲ. ಅವರ ಇಂಗ್ಲಿಷ್ ಲೇಖನಗಳಲ್ಲಿ ಒಂದೊಂದೂ, ಒಂದೊಂದು ಕಾರಣಕ್ಕಾಗಿ, ಮಹತ್ವದವಾಗಿವೆ. 'Tragic Ravana' ಲೇಖನದಲ್ಲಿ ಅವರು ನಾಗ ಚಂದ್ರನ 'ರಾಮಚಂದ್ರ ಚರಿತ ಪುರಾಣ'ದಲ್ಲಿನ ರಾವಣ ಪಾತ್ರದ ವಿವೇಚನೆ ನಡೆಸಿದ್ದರೆ, 'Recent Tendeneies in Kannada Literature' ಲೇಖನದಲ್ಲಿ ನಮಗೆ ೧೯೨೭ರ ವರೆಗಿನ ಕನ್ನಡ ಸಾಹಿತ್ಯದ ಸ್ಥೂಲ ಸಮೀಕ್ಷೆ ಲಭಿಸುತ್ತದೆ. ಇ.ಪಿ. ರೈಸ್ ಅವರ 'Kanarese Literature' ಗ್ರಂಥದಲ್ಲಿನ ಸೂಕ್ಷ್ಮತಪ್ಪುಗಳ ಮೇಲೂ ಶ್ರೀ ಅವರ ಚಾಣಕ್ಷ ದೃಷ್ಟಿ ಹರಿದಿದೆ. ಮಾಸ್ತಿಯವರ 'ರಾಮನವಮಿ'ಯನ್ನು ಕುರಿತ ಲೇಖನದಲ್ಲೂ Tragic Ravana ದಲ್ಲೂ ನಾವು ಕಾಣುವ ಕನ್ನಡ ಪದ್ಯಗಳ ಇಂಗ್ಲಿಷ್ ಅನುವಾದ ಗಳು, ಇಂಗ್ಲಿಷ್–ಕನ್ನಡ ಭಾಷಾಂತರದಷ್ಟೇ ಸಮರ್ಥವಾಗಿ ಕನ್ನಡ–ಇಂಗ್ಲಿಷ್ ಭಾಷಾಂತರವನ್ನೂ ಶ್ರೀ ಅವರು ಮಾಡಬಲ್ಲವರಾಗಿದ್ದರೆಂಬುದನ್ನು ದೃಢೀ ಕರಿಸುತ್ತವೆ.

ಶ್ರೀ ಎಸ್. ವಿ. ರಂಗಣ್ಣನವರು ಹೇಳುವಂತೆ ('ಪೀಠಿಕೆ ೧', ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಪು. ೨೧) 'ಬರವಣಿಗೆಯಾಗಲೀ ಭಾಷಣವಾಗಲೀ ಒಂದೇ ಬಗೆಯ ಶೈಲಿ "ಶ್ರೀ"ಯವರ ಹೆಗ್ಗುರುತು' ಮತ್ತು ಅವರು ಕಸುಬುಗಾರ ಭಾಷಣಕಾರರು, ತಡೆಯಿಲ್ಲದ ತಮ್ಮ ಸರಾಗ ಉಪನ್ಯಾಸಗಳಿಂದ ಕೇಳುಗರನ್ನು ನಿಲ್ಲಿಸಿಕೊಳ್ಳ ಬಲ್ಲಂಥವರು. ಇಂದು ಕೇವಲ ಸಪ್ಪೆ ಘೋಷಣೆಗಳಾಗಿ ಕಂಡು ಬರುವ 'ನಮ್ಮ ಕುಲ, ಕನ್ನಡ ಕುಲ', 'ಕನ್ನಡನಾಡಿಗೆ ಕನ್ನಡವೇ ಗತಿ', 'ಕನ್ನಡ ದೇಶದಲ್ಲಿ ಕನ್ನಡವೇ ದೇಶಭಾಷೆಯಾಗಬೇಕು' ಮೊದಲಾದ ಮಾತು ಗಳು, ಅವು 'ಶ್ರೀ' ಮುಖದಿಂದ ಹೊರಹೊಮ್ಮಿದ ಆ ಕಾಲದಲ್ಲಿ ಒಂದು ಸಮಗ್ರ ಜನಾಂಗಕ್ಕೇ ಸ್ಫೂರ್ತಿ ನೀಡಬಲ್ಲ ಸೂಕ್ತಿಗಳಾಗಿದ್ದವೆಂಬುದನ್ನು ನಾವು ಮರೆಯ ಬಾರದು. ಒಟ್ಟಿನಲ್ಲಿ ಕನ್ನಡ ಎಂಬ ಶಬ್ದವೇ, ಕನ್ನಡದ ಬಗೆಗಿದ್ದ ಅಭಿಮಾನವೇ ಶ್ರೀ ಅವರ ಸಮಸ್ತ ಬರವಣಿಗೆಗೂ ಭಾಷಣಗಳಿಗೂ ಮೂಲ ಸ್ಫೂರ್ತಿ ಯಾಗಿತ್ತು.

ಕನ್ನಡ ನಾಡಿನಲ್ಲಿ ಕನ್ನಡದ ಪುನರುಜ್ಜೀವನ ಹಾಗೂ ಕನ್ನಡಿಗರ ಉದ್ಧಾರ ಗಳು ಆಗಬೇಕಾದ ರೀತಿಯನ್ನು ಶ್ರೀ ಅವರು ಜನರಿಗೆ ತಮ್ಮೆಲ್ಲ ಭಾಷಣ—

ಲೇಖನಗಳಲ್ಲೂ ಮತ್ತೆಮತ್ತೆ ಒತ್ತಿಹೇಳಿದ್ದಾರೆ. ಡಾ. ಹಾ. ಮಾ. ನಾಯಕರು ಹೇಳುವಂತೆ, ('ಮುನ್ನುಡಿ', ಶ್ರೀ ಸಾಹಿತ್ಯ, ಪು. iii) 'ಚಳವಳಿ ಎಂಬ ಮಾತಿನ ಅರ್ಥ ಈಗ ಸವೆದಿದೆ; ಕೆಟ್ಟಿದೆ. ಆದರ ನಿಜವಾದ ಅರ್ಥದಲ್ಲಿ ಶ್ರೀಕಂಠಯ್ಯನವರು ಕನ್ನಡದ ಮೊದಲನೆಯ ಚಳವಳಿಗಾರರು; ಕನ್ನಡ ಚಳವಳಿಯನ್ನು ಆರಂಭಿಸಿದವರೇ ಅವರು.' ನಮ್ಮ ಭಾಷೆಯನ್ನು ನಾವು ಎತ್ತದೇ ಹೋದರೆ, ಎತ್ತುವರಾರು? ಎತ್ತುವುದಕ್ಕೆ ನಿಂತರೆ, ತಡೆಯುವರು ಯಾರು?' ಎಂದು ಸುಮಾರು ಅರ್ಧಶತಕದ ಹಿಂದೆಯೇ ಪ್ರಶ್ನಿಸಿದ ಶ್ರೀ ಅವರ ದೃಷ್ಟಿ-ಧೋರಣೆಗಳನ್ನು ನಮ್ಮ ಇಂದಿನ ಕನ್ನಡ ಚಳವಳಿಗಾರರು ಅರಿತುಕೊಳ್ಳಬೇಕಾದ ಅಗತ್ಯ ತುಂಬಾ ಇದೆ.

ಶಂಸ ಐತಾಳ



ಕ್ಷಣ ಕ್ಷಣಕ್ಕೂ ಆಯುಷ್ಯ ಹೋಗುತ್ತದೆ. ಆದ್ದರಿಂದ ಹೇ ಮೂಢ ಮತಿಯೇ, ಗೋವಿಂದನನ್ನು ಭಜಿಸು.

—ಶ್ರೀ ಶಂಕರಾಚಾರ್ಯರು

ತಿರಸ್ಕಾರದಿಂದ ಅಥವಾ ನಟನೆಯಿಂದ ಯಾರಿಗೂ ದಾನ ಮಾಡಬಾರದು. ಹೀಗೆಮಾಡಿದ ದಾನವು ದಾನಿಯನ್ನೇ ನಾಶಪಡಿಸುವುದು

—ವಾಲ್ಮೀಕಿ

ಯೌವನ ಒಂದು ತಪ್ಪು ಮಧ್ಯಂತರ ಜೀವನ ಒಂದು ಹೋರಾಟ. ವಾರ್ಧಿಕ್ಯ ಒಂದು ಪಶ್ಚಾತ್ತಾಪ.

—ಬೆಂಜಮಿನ್ ಡಿಸ್ರೇಲಿ

# ಹೊಂಗನಸುಗಳು

ಬಿ. ಎಂ. ಶ್ರೀಯವರ ಕಂಠ ಕಂಚಿನ ಕಂಠವೆಂದು ಕೇಳಿದ್ದೇವೆ. ಅವರ ಶ್ರೀಕಂಠದಿಂದ ಬಂದ ಕನ್ನಡ ವಾಣಿಯನ್ನು ಕೇಳಿದ ಜನ ಎಚ್ಚೆತ್ತು ಅವರು ಕೊಡುತ್ತಿದ್ದ ಕನ್ನಡದ ಕರೆಗೆ ಓಗೊಟ್ಟು ಕ್ರಿಯಾಶೀಲರಾಗಿಬಿಡುತ್ತಿದ್ದರಂತೆ, ಹಾಗೆಂದು ಕೇಳಿದ್ದೇವೆ. ಅವರು ಇದ್ದದ್ದು ಕನ್ನಡವೆಂದು ಬಹಳ ಮಾತಾಡಿದರೇ, ಇಂಗ್ಲಿಷಿನಲ್ಲಿ ಯೋಗ್ಯತೆ ಸಾಲದ್ದರಿಂದ ಈ ಮನುಷ್ಯ ಕನ್ನಡಕ್ಕೆ ತಿರುಗಿದ್ದಾನೆ ಎಂದು ಹೇಳುತ್ತಿದ್ದ ಕಾಲದಲ್ಲಿ. ಅಂಥ ಕಾಲದಲ್ಲಿದ್ದು ಕನ್ನಡಕ್ಕಿದ್ದ ತಿರಸ್ಕಾರಭಾವವನ್ನು ಮೆಟ್ಟಿ ಪುರಸ್ಕಾರವನ್ನು ತಂದುಕೊಟ್ಟ ಶ್ರೇಯಸ್ಸು ಶ್ರೀ ಅವರದು. ಕನ್ನಡದ ಬಗೆಗಿನ ಅವರ ಅಗಾಧ ಶ್ರದ್ಧೆ, ಕನ್ನಡ ತಲೆಯೆತ್ತುವ ಬಗ್ಗೆ, ಅದರ ಅಭಿವೃದ್ಧಿಯ ಬಗ್ಗೆ, ಅದನ್ನು ಕರ್ನಾಟಕ ರತ್ನಸಿಂಹಾಸನದ ಮೇಲೆ ಕೂರಿಸಿ ಮೆರೆಸುವ ಬಗ್ಗೆ ಅವರಿಗಿದ್ದ ಕಳಕಳಿ ಕೇವಲ ಕಳಕಳಿಯಾಗದೆ ಕ್ರಿಯಾಶೀಲವಾದ ಕಳಕಳಿಯಾಗಿತ್ತು. ಅಂತೆಯೇ ಕನ್ನಡ ರಾಜರಾಜೇಶ್ವರಿಯ ತೇರನ್ನು ಎಳೆದ ಧೀಮಂತ ಆಚಾರ್ಯ ಬಿಎಂಶ್ರೀ ಅವರದು ಬಹುಮುಖ ವ್ಯಕ್ತಿತ್ವ. ಕನ್ನಡ–ಇಂಗ್ಲಿಷ್–ತಮಿಳು ಭಾಷೆಗಳಲ್ಲಿ ಸಮನಾದ ಪಾಂಡಿತ್ಯವನ್ನು ಪಡೆದಿದ್ದ ಘನ ವಿದ್ವಾಂಸರು; ಇಂಗ್ಲಿಷ್ ಭಾಷೆಯಲ್ಲಿದ್ದ ಉತ್ತಮ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಟ್ಟು ಕನ್ನಡ ಸಾಹಿತ್ಯದ ಕಣಜವನ್ನು ತುಂಬಿದವರು; ಅನುವಾದಕರಾಗಿ, ರೂಪಾಂತರಕಾರರಾಗಿ, ಸ್ವಂತ ಕೃತಿರಚನೆ ಮಾಡಿದ ಸಾಹಿತಿಗಳು; ಸಾಹಿತ್ಯೋಪಾಸಕರು, ಕಾವ್ಯರಸಿಕರು. ಕಾಲ ಧರ್ಮಕ್ಕನುಗುಣವಾಗಿ ರಾಜಭಕ್ತಿಯನ್ನು ತೋರಿದವರು. ತಮ್ಮ ಕಾಲದಲ್ಲಿ ಜೀವಂತವಾಗಿದ್ದು ಕಾಲಧರ್ಮವನ್ನು ಮೈಗೂಡಿಸಿಕೊಂಡು ತಮ್ಮ ಕಾಲದ ಬದುಕಿಗೆ ಮಿಡಿದ ಕವಿಗಳು. ಉತ್ತಮ ಪ್ರಾಧ್ಯಾಪಕರಾಗಿದ್ದ ಶ್ರೀ ಅವರು ಶಿಕ್ಷಕ ಮತ್ತು ಕವಿಮನೋಧರ್ಮದ ಜೊತೆಗೆ ಸ್ವದೇಶಾಭಿಮಾನ, ಅದರ ಅಂಗವಾಗಿ ಕನ್ನಡನಾಡನ್ನು, ನಾಡನುಡಿಯನ್ನು ಕುರಿತ ಕಳಕಳಿಯನ್ನು ಹೊಂದಿದ್ದವರು. ಹೀಗೆ ವೈವಿಧ್ಯಮಯ ವ್ಯಕ್ತಿತ್ವವನ್ನು ಪಡೆದಿದ್ದ ಆಚಾರ್ಯ ಬಿಎಂಶ್ರೀ ಅವರ ಸ್ವತಂತ್ರ ಪದ್ಯಕೃತಿ 'ಹೊಂಗನಸುಗಳು.'

ತಾಯಿ ಭಾರತಾಂಬೆ ಸ್ವತಂತ್ರಳಾಗಿ ತಲೆಯೆತ್ತಿ ಮೆರೆಯಬೇಕು, ಕನ್ನಡ ತಾಯಿನುಡಿ ಹಿರಿದಾಗಬೇಕು, ಕನ್ನಡನಾಡು ಎತ್ತರಕ್ಕೆ ಬೆಳೆದು ಅವಳ ಬದುಕು, ಅವಳ ಮಕ್ಕಳ ಬದುಕು ಹಸನಾಗಿ ಎತ್ತರಕ್ಕೇರಿ ಬೆಳೆಯಬೇಕು.

ಎಂದು ಮುಂತಾಗಿ ಕಂಡ ಕನಸು, ತಮ್ಮ ಸುಮಾರು ಮೂವತ್ತೈದು ವರ್ಷಗಳ ಬದುಕಿನ ಅನುಭವವನ್ನು ಹೊತ್ತು 'ಹೊಂಗನಸುಗಳು' ಕೃತಿ ರೂಪದಲ್ಲಿ ಪ್ರಕಟವಾಯಿತು. ಹೀಗಾಗಿ ಈ ಕೃತಿಯಲ್ಲಿ ೧) ಭರತಮಾತೆಯು ನುಡಿ, ೨) ಮೈಸೂರು ಮಕ್ಕಳು, ೩) ಕನ್ನಡ ಹೆಣ್ಣು, ೪) ಶ್ರೀಕೃಷ್ಣರಾಜ ಪ್ರಗಾಥ, ೫) ಕನ್ನಡ ತಾಯ ನೋಟ, ೬) ಕನ್ನಡದ ಬಾವುಟ, ೭) ಬಾನ್‌ಕೊಂಡ ಕೃಷ್ಣನ್, ೮) ಶ್ರೀಜಯನ ಬೆಳಕು, ೯) ಅರಮನೆಯ ಒಸಗೆ, ೧೦) ಶುಕ್ರ ಗೀತೆ, ೧೧) ಪಂಪನ ಒರತೆ, ೧೨) ಧರ್ಮಯುದ್ಧ, ೧೩) ಶಿಲ್ಪದಿಗಾರಂ-ಮುನ್ನುಡಿ ಮತ್ತು ೧೪) ಹಾರೈಕೆ ಎಂಬುದಾಗಿ ಹದಿನಾಲ್ಕು ಕವನಗಳು, ಶ್ರೀಯವರ ಸ್ವತಂತ್ರವಾದ ಬಿಡಿ ಕವನಗಳು ಸಂಗ್ರಹಗೊಂಡಿವೆ.

ನಾವು ಮೊದಲು ಭಾರತೀಯರು, ಅನಂತರ ಆಕೆಯ ತನುಜಾತೆಯಾದ ಕನ್ನಡ ಮಾತೆಯ ಸುಪುತ್ರರು. ಭಾರತ ಸ್ವತಂತ್ರವಾಗಿ ಆ ಮೂಲಕ ನಮ್ಮನ್ನು ಘನತೆಗೇರಿಸಿಕೊಳ್ಳಬೇಕು. ಅಂತೆಯೇ ಅನ್ಯರ ತೊತ್ತಾಗಿ, ಕಂದಿ–ಕುಂದಿದ ಭರತಮಾತೆಯನ್ನು ಕುರಿತು ಹಾಡುತ್ತಾರೆ. ಆಕೆಯ ಈ ಸ್ಥಿತಿಗೆ ಮರುಗುತ್ತಾರೆ. 'ಭರತ ಮಾತೆಯೆ, ಭರತ ಮಾತೆಯೆ, ಎಂದು ನೀ ತಲೆಯೆತ್ತುವೆ? ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ; ಎಂದು ಮಲಿನತೆ ನೀಗುವೆ-ಮಗುಳೆಂದು ನಗುಮುಖವಾಗುವೆ?' ಎಂದು ಆಕೆಯ ಹಿರಿತನಕ್ಕೆ ಮೊದಲು ಹಂಬಲಿಸುತ್ತಾರೆ. ಆಕೆ ತಲೆಯೆತ್ತುವುದೆಂದರೆ ಕೇವಲ ಭಾರತೀಯರ, ಕನ್ನಡಿಗರ ಹಿರಿಮೆ ಹೆಚ್ಚುವುದಿಲ್ಲ, ಇಡೀ ಲೋಕದ ಜನರ ಹೃದಯ ಬಿಡುಗಡೆ ಹೊಂದಿ ತನ್ನ ಮಹಿಮೆಯನ್ನು ಹಾಡುತ್ತ ಹಿರಿದಾಗುತ್ತದೆ! ಎಂಥ ವಿಶ್ವವಿಶಾಲ ಮನೋಭಾವ, ಭರತಮಾತೆಯ ಹಿರಿಮೆಯ ಮನೋಭಾವ! ಅಂತೆಯೇ ಭರತಮಾತೆಯ ಇಂಥ ಹಿರಿಮೆಗೆ ಕಾರಣರಾದ ಭಾರತೀಯ ಧರ್ಮದ ಹಿರಿಮೆಯನ್ನು ಸಾರಿದ ಋಷಿಗಳಲ್ಲಿ, ಘನತೆಯ ಬದುಕನ್ನು ಕುರಿತು ಹಾಡಿದ ಕವಿಗಳೆಲ್ಲಿ? ಆ ಧರ್ಮದ ದಣಿಗಳು, ಆ ಜ್ಞಾನದ ಕಣಿಗಳು, ಈಗ ಎಲ್ಲಿ? ಕಲೆಗಳನ್ನು ಬೆಳೆಸಿ, ಲಕ್ಷ್ಮಿಯನ್ನು ಒಲಿಸಿ, ರಾಜ್ಯವನ್ನು ಕಟ್ಟಿ, ಶಾಂತಿಯನ್ನು ಬೀರಿದ ಆ ನಿನ್ನ ವೀರರು ಎಲ್ಲಿ? ಭರತಮಾತೆಯೆ, ಭರತಮಾತೆಯೆ, ನಮ್ಮ ಹಂಬಲು ಕೇಳದೆ? ನಿನ್ನ ಮಕ್ಕಳಿಗೆ ಒಲಿದು ನುಡಿವೆಯೆಂದು ಎಂದು ಮುಂತಾಗಿ ಹಂಬಲಿಸುತ್ತಾರೆ.

ನಮ್ಮನ್ನು ಕಂಡು ಬೇಸರವೆ, ತಾಯಿ. ಹೌದು, ಅಲ್ಲದಿನ್ನೇನು? ನೀನು ನೀಡಿದ ಧರ್ಮಪಥವನ್ನು ಬಿಟ್ಟು ನಡೆದೆವು; ಬದುಕ ತಿದ್ದಿಕೊಳ್ಳದೆ ಹೋದೆವು;

ನಿನ್ನ ಸೇವೆಯ ಮರೆತು ನಮ್ಮನಮ್ಮಲ್ಲೆ ಹೋರಾಡಿ ಕೆಟ್ಟೆವು; ಇಬ್ಬರ ಜಗಳ ಮೂರನೆಯವನಿಗೆ ಲಾಭ ಎಂಬುದನ್ನು ನಿಜ ಮಾಡಿದೆವು. ನಿನ್ನನ್ನು ಪರರಿಗೆ ಕೊಟ್ಟು ನಿನ್ನ ತೇಜೋವಧೆ ಮಾಡಿದೆವು. ನಮ್ಮ ಮನೆಯಲ್ಲೇ ನಾವು ಪರರಿಗಾಗಿ ದುಡಿಯುವ ತೊತ್ತುಗಳಾದೆವು; ನಮ್ಮ ಹಿರಿಯರ ಪುಣ್ಯ, ಕೀರ್ತಿಯ ನೋಲಿಸಿಕೊಳ್ಳದೆ ಹೋದೆವು; ತಪ್ಪಿದೆವು ನಾವು, ತಪ್ಪಿದೆವು. ನಮ್ಮನ್ನು ಬಾಳಿಸು ಕೂಡಿಸು ಸಲಹು ಸದ್ಗತಿ ಕಾಣಿಸು ಎಂದು ಕವಿವಾಣಿ ಮೊರೆಯಿಟ್ಟಿತು.

ಎಷ್ಟಾದರೂ ತಾಯಲ್ಲವೆ? ಮರೆವುದೆಂತು, ಉಪೇಕ್ಷಿಪುದೆಂತು? 'ಮಕ್ಕಳಿರ, ಅಕ್ಕರೆಯ ಮಕ್ಕಳಿರ, ಹೆತ್ತ ಕರುಳನು ಮರೆವೆನೆ? ಸೊಕ್ಕನಡೆದವರೀಗ ತಿಳಿದಿರಿ, ಇನ್ನು ನಿಮ್ಮನು ತೊರೆವೆನೆ? ಕೇಳಿ, ಎದೆಯಲಿ ಹದಿಯಿರಿ—ಹೊಸ ಆಳ ಬಾಳಲಿ ಹುದಿಯಿರಿ' ಎಂಬ ಆಶ್ವಾಸನೆಯ ಮೂಲಕ ಪಶ್ಚಾತ್ತಾಪ ದಗ್ಧ ಪುನೀತ ಹೃದಯಕ್ಕೆ ಆಸೆಯ ತಂಪನ್ನೆರೆಯುತ್ತಾಳೆ, ಭರತಮಾತೆ. 'ಜೀವ ಸನ್ನಿಧಿಯಿಂದಲೇ ನಿಮಗೆ ಮೊದಲು ಧರ್ಮವನ್ನು ತಂದುಕೊಟ್ಟೆ, ಜೀವಕಲೆಗಳನ್ನು ಕಲಿಸಿ ಸುಖದಲಿ ಸೊಬಗ ಬೆಳೆಸುತ ಬಂದೆ; ಆದರೇನು ನೀವೋ ಕಣ್ಣಿದ್ದೂ ಕುರುಡರಾದಿರಿ. ಹೊಳೆವ ಸತ್ಯವನ್ನು ಹಿಡಿದು ಮುಂದಕೆ ನೂಕಲಮ್ಮದೆ ನಿಂದಿರಿ. ಹಳದ ನೆಮ್ಮುತ್ತ ಜಾತಿಮತಗಳ ಮದದ ಗುಹೆಯಲಿ ಕೆಡೆದಿರಿ. ಬಯಲ ಬೆಳಕಿಗೆ ಮುಳಿದಿರಿ—ಸಮುದಯದ ನಡತೆಯ ಹಳಿದಿರಿ'. ಒಡಹುಟ್ಟಿದ ಒಲುಮೆಯನ್ನು ತಿಳಿಸುವ ಗುರುಗಳನ್ನು, ಗಡಿಗಳನ್ನು ಒತ್ತಿ ಹಲವು ರಾಜರನ್ನು ಬೆಸೆವ, ಸಂಬಂಧಗಳನ್ನು ಕಲ್ಪಿಸಿ ಸ್ನೇಹ-ಸೌಹಾರ್ದಗಳನ್ನು ಬಿತ್ತುವ ಅನೇಕ ಸಮದರ್ಶಿ ರಾಜರನ್ನು ಮೇಲಿಂದಮೇಲೆ ಕಳುಹಿಸಿದೆ. ದೈವಭಕ್ತಿಯ, ಭ್ರಾತೃಧರ್ಮದ ಮುಸ್ಲಿಮರನ್ನು ಕಳುಹಿದೆ, ಆದರೆ ಅವರು ಸೆಡೆತು ನಮ್ಮ ಸಮಕೇ ಮಲೆತರು. ಕೊನೆಗೀಗ ನಮ್ಮ ಮನೆತನದ ಒಳಿತನ್ನು ನೆನೆದು ಕಡಲರಾಣಿ ಬ್ರಿಟಾನಿಯಳನ್ನು, ನನ್ನ ತಂಗಿಯ ಸ್ನೇಹವನ್ನು ಪಡೆದೆ. ಆಕೆ ನಾಡನ್ನೆಲ್ಲ ಒಂದಾಗಿಸಿದಳು; ನಮ್ಮ ಕಣ್ಣು ತೆರೆಸಿದಳು; ಪ್ರಪಂಚವತ್ತ ಕಣ್ಣು ಬಿಟ್ಟು ನೋಡುವಂತೆ ಮಾಡಿದಳು; ಲೋಕದ ಸಕಲಧರ್ಮಗಳ ತಿರುಳನ್ನು ಎತ್ತಿ ತೋರಿದಳು; ಸಮಸ್ತ ಜ್ಞಾನದ ಕಿಟಕಿ ಬಾಗಿಲುಗಳನ್ನು ತೆರೆದಳು; ವಿಶ್ವದರ್ಶನ ಮಾಡಿಸಿದಳು. ಆವಳ ಕೊರತೆಗಳನ್ನು ಮರೆಯಿರಿ, ಹಿರಿಯ ಗುಣಗಳನ್ನು ಗ್ರಹಿಸಿರಿ ಎಂದು ಹಾಡಿದರು. ಕನ್ನಡ ಬೆಳೆಯಬೇಕಾದರೆ, ನಾಡು-ನುಡಿ ಜನ ಎತ್ತರವಾಗಿ ವಿಸ್ತಾರವಾಗಿ ಬೆಳೆದು, ವಿಶ್ವದೊಂದಿಗೆ ಹೆಗಲೆಣೆಯಾಗಿ

ನಿಂತು ಅದರ ಉದ್ಧಗಲಕ್ಕೆ ಬೆಳೆಯಬೇಕಾದರೆ ಆಂಗ್ಲ ಸಖ್ಯವಿಲ್ಲದೆ ಸಾಧ್ಯವಿಲ್ಲ ಎಂದು ಆಕೆಯನ್ನು ತಂಗಿಯ ಸ್ಥಾನದಲ್ಲಿ ಕೂರಿಸಿಕೊಂಡು ಕನ್ನಡ ಬಾವುಟ ವನ್ನು ಏರಿಸಿದರು, ಹಾರಿಸಿದರು. ಇದು ಹಿರಿಯ ಸಿರಿಯೊಕ್ಕಲು, ಇದರ ಸಹವಾಸ ಸಕಲ ಲೋಕವಾಸ, ಇದರ ನಂಟನ್ನು ಸಡಿಲಗೊಳಿಸದೆ ಅದನ್ನು ಭದ್ರವಾಗಿ ಒಲಿದು ನಡೆಯಿರಿ ಎಂದು ಭರತಮಾತೆ ಆಶೀರ್ವದಿಸುತ್ತಾಳೆ.

ಧರ್ಮ ಶಾಂತಿ ಸ್ವಾತಂತ್ರ್ಯ ಇವು ನಮ್ಮ ಹಿರಿಯರ ನುಡಿಗಳು. ಇವೇ ನನ್ನಿನಿಯ ತಂಗಿಯ ಮುಡಿಗಳು, ಮಾನವತೆಯ ತಾರಕ ಮಂತ್ರಗಳು. ಇವನ್ನು ಹಿಡಿದು ಸಾಗುತ್ತೇವೆ :

—ಭರತಮಾತೆಯೆ, ಭರತಮಾತೆಯೆ, ನಿನ್ನ ಮಾತನು ಮರೆಯೆವು ;—
ಹಿರಿಯ ಬಳಗದ ಕಾರ್ಯ ಚತುರೆಯ ಸಾಕುತಾಯಿಯ ತೊರೆಯೆವು ;
ಒಂದೆ ಜನವಾಗಿರುವೆವು—ಒಲಿ
ದೊಂದೆ ಭಾರವ ಹೊರುವೆವು.

ಹಿಂದಿನ ನಿನ್ನ ವೈಭವವನ್ನೆಲ್ಲ ಮರಳಿ ಪಡೆವೆವು ಎಂದು ಕವಿ ಭರತಮಾತೆಗೆ ಆಶ್ವಾಸನೆ ನೀಡುವುದರ ಮೂಲಕ ಭಾರತಾಂಬೆಯ ಅಕ್ಕರೆಯ ಪ್ರೀತಿಯನ್ನು ಗಳಿಸುವುದರ ಮೂಲಕ ಕನ್ನಡ ರಾಜರಾಜೇಶ್ವರಿಯ ತೇರನ್ನು ಎಳೆಯಲು ಮುಂದಾಗುತ್ತಾರೆ.

ಬಿ.ಎಂ.ಶ್ರೀ. ಅವರು ಬದುಕಿದ್ದುದು ಕೃಷ್ಣರಾಜ ಒಡೆಯರ ಕಾಲದಲ್ಲಿ. ಕೃಷ್ಣರಾಜ ಒಡೆಯರು ಭರತಖಂಡದಲ್ಲೆಲ್ಲೂ ಶೀಲಕ್ಕೆ, ಶುಚಿಗೆ, ಉದಾರತೆಗೆ, ವಿದ್ಯಾಸಂಸ್ಕಾರಗಳ ಪ್ರೀತಿಗೆ ಹೆಸರಾದವರು. ಮೈಸೂರು ವಿಶ್ವವಿದ್ಯಾನಿಲಯ ದಲ್ಲಿ ಕನ್ನಡಕ್ಕೆ ಒಂದು ಪ್ರಧಾನ ಸ್ಥಾನ ದೊರೆಯಬೇಕು, ಅದು ಇಲ್ಲಿ ಏಳಿಗೆ ಹೊಂದಬೇಕು ಎಂದು ತಾವು ಅವರ ಛಾನ್ಸಲರಾಗಿ ನೀಡಿದ ಮೊದಲ ಭಾಷಣ ದಲ್ಲಿ ನುಡಿದವರು. ಧರ್ಮನಿಷ್ಠರು, ಧರ್ಮದ ಹಾದಿಯಲ್ಲಿ ನಡೆದ ಪುಣ್ಯ ಪುರುಷರು, ರಾಜರ್ಷಿಗಳು, ರಸಯೋಗಿಗಳು. ಇಂಥವರ ಬಗ್ಗೆ ಬರೆದು–ಹಾಡಿದರೆ ತಪ್ಪಾಗಲಾರದೇನೋ, ಅಲ್ಲದೆ ಇದು ಕನ್ನಡ ಸಾಹಿತ್ಯ ಪರಂಪರೆ ಯಲ್ಲಿ ಹೊಸದೇನೂ ಅಲ್ಲ. ಅಂತೆಯೇ ಬಿ.ಎಂ.ಶ್ರೀ. ಅವರು ಕಾಲಧರ್ಮಕ್ಕೆ ತಕ್ಕಂತೆ ನಾಲ್ವಡಿ ಕೃಷ್ಣನನ್ನು ಕುರಿತು ಹಾಡುವುದರ ಮೂಲಕ ತಮ್ಮ ರಾಜ ಭಕ್ತಿಯನ್ನು ಮೆರೆದರು. ಇದು ಇಲ್ಲಿನ ಅವರ ಕವನಗಳಲ್ಲಿ ತುಂಬ ಸೊಗಸಾಗಿ ಅಭಿವ್ಯಕ್ತಗೊಂಡಿದೆ. 'ಮೈಸೂರು ಮಕ್ಕಳು' ಕವನದಲ್ಲಿ ಮೈಸೂರರಸಿನ, ಮೈಸೂರಿನ, ಮೈಸೂರು ಮಕ್ಕಳ ಗುಣಗಾನ ಮಾಡುತ್ತಾರೆ. ನಮ್ಮ ನಾಡು

ಮೈಸೂರು, ನಮ್ಮ ಊರು ಮೈಸೂರು, ಕನ್ನಡದ ನಾಡು ಮೈಸೂರು, ನಾಲುಮುಡಿ ಕೃಷ್ಣನ ಮೈಸೂರು. ಈ ನಾಡಿನ ಉದ್ದಕ್ಕೂ ಬಾನಂಚಿನಲ್ಲಿ ಹುದುಗಿ ಕಾಪುರ್ಗಿಲಿನಂತಿರುವ ಬೆಟ್ಟಸಾಲು, ಸುಂದರವಾಗಿ ಕಂಗೊಳಿಸುವ ಹಳ್ಳಿಗಳು, ತಾವರೆಯ ಕೆರೆಗಳು, ತೆಂಗು-ಕಂಗುಗಳನ್ನು ಹೊತ್ತುನಿಂತಿರುವ ತೋಟಗಳು,ಹಸುರಿನ ಕಂಗೊಳಿಸುವ ಹೊಲಗಳು ಕಾಡಲ್ಲಿ ನುಸಿಯುತ್ತ, ಕಲ್ಲಿನಲಿ ತೊರೆಯುತ್ತ, ಮರಳಿನಲಿ ಸುಳಿಸುಳಿದು, ಪಯಿರುಗಳ ಬದುಕಾಗಿ, ಹೊಳಲುಗಳ ಬೆಳಕಾಗಿ, ಕಣ್ಣುಗಳ ಬೆರಗಾಗಿ ಹರಿವ ಹೊನಲು, ಇವುಗಳಿಂದ ಸಿರಿಯು ತವುರಾಗಿ ಮೆರೆವ ನಲಿವ ನಾಡು. ಇಂಥ ನಮ್ಮ ನಾಡೊಂದು, ದೊರೆಯೊಬ್ಬನೆಂದು ನಲಿವ, ಜಾಣ್ಮೆನಲಿ ಚೆಲುವಿನಲಿ ಸೊಗಸಿನಲ್ಲಿ ನಯದಲ್ಲಿ ಔದಾರ್ಯದಲ್ಲಿ ಕಾರ್ಯದಲ್ಲಿ ಕಳಸವೆನಿಸಿ ಮೆರೆವ ಕನ್ನಡಿಗರನ್ನು ಅವರ ಐಸಿರಿಯನ್ನು ವರ್ಣಿಸುವುದೆಂತು ಎಂದು ಕನ್ನಡ ನೆಲ, ಕನ್ನಡಿಗರ ಸ್ವಭಾವಗಳನ್ನು ಮುಕ್ತಕಂಠದಿಂದ ಹೊಗಳಿ ಹಾಡಿದ್ದಾರೆ. ಇದು ಎಂಥ ನಾಡು !



ಚಿನ್ನದ ನಾಡದು
ಮೈಸೂರು.
ಗಂಧದ ಗುಡಿಯದು
ಮೈಸೂರು.
ವೀಣೆಯ ಬೆಡಗದು
ಮೈಸೂರು.
ನಾಲುಮುಡಿ ಕೃಷ್ಣನ
ಮೈಸೂರು.

ಧೀರ, ಗಂಭೀರ, ಸತ್ಯ, ಪ್ರಜೆಯ ತಂದೆ, ರಾಜರ್ಷಿ, ಕರ್ಮಯೋಗಿ ಎಂದು ಮುಂತಾಗಿ ಅರಸನ್ನು ಎಷ್ಟು ಹಾಡಿದರೂ ತಣಿಯದು. ಅಂತೆಯೇ ನಾಡನ್ನು, ನಾಡ ನುಡಿಯನ್ನು ಎಷ್ಟು ಹೊಗಳಿದರೂ ಸಾಲದು. ಈ ಮೈಸೂರು ಬೆಳೆಯುವ ನಾಡು, ಇಳೆಯ ಮಾದರಿ, ಕನ್ನಡಿಗನುಸಿರು ನಾಲುಮುಡಿ ಕೃಷ್ಣನ ಮೈಸೂರು.

'ಶ್ರೀ ಕೃಷ್ಣರಾಜರಜಮಹೋತ್ಸವ ಪ್ರಗಾಥ' ಶ್ರೀ ಕೃಷ್ಣರಾಜ ಬೆಳ್ಳಿ ಹಬ್ಬದ ಸಂಭ್ರಮದ ಹೊಸಗೆ ಗೀತೆ. ಪುಣ್ಯದರಸು, ಧರ್ಮದಾಳು, ಕನ್ನಡದ ಮಯಿರಮುಡಿ ಕೃಷ್ಣರಾಜನನ್ನು ಚಿರಕಾಲ ಬಾಳುವಂತೆ ಹರಸಿ ಆಶೀರ್ವದಿಸೆಂದು ಗೌರಿಯನ್ನು ವೀಣಾಪಾಣಿಯನ್ನು ಪ್ರಾರ್ಥಿಸುತ್ತಾರೆ. ಅಕ್ಕ–ತಂಗಿಯರಂತೆ

ರುವ ಕನ್ನಡ ಸಿರಿದೇವಿ, ಕಡಲರಾಣಿ ಬ್ರಿಟಾನಿಯಾ ಹಾಗೂ ಭಾರತಮಾತೆಯರು ಕೂಡಿ ಹರಸುತ್ತಾರೆ. ದೂರದ ಗೌರಿಯೋಲಗದಿಂದ ಹಿಮವಂತನೆಡೆಯಿಂದ ರಜತಗಿರಿಯಿಂದ ಪೂರ್ಣಕುಂಭವನ್ನು ಹೊತ್ತುತಂದ ಭರತಮಾತೆ ಕಡಲರಾಣಿಯೊಂದಿಗಿರುವ ಕನ್ನಡಾಂಬೆಯು ಬಳಿಯಲ್ಲಿ ನಿಂತು :

'ಬಾಳು, ಕನ್ನಡದರಸಿ, ಗೌರಿಯ ಕೃಪೆಯ ಸುಧೆಯನು ಚೆಲ್ಲಿಸು
ಕೃಷ್ಣರಾಜನ ಕೀರ್ತಿಹಬ್ಬಿದ ಚೆಲುವು ನಾಡನು ಗೆಲ್ಲಿಸು,
ಕೃಷ್ಣರಾಜನ ಸಿರಿಯ ಮುಡಿಯಲಿ ಸಕಲ ಭಾಗ್ಯವ ಸಲ್ಲಿಸು'

ಎಂದು ಹರಸಿ ಮುಗಿಲ ಮರೆಯಲಿ ಸಂದಳು.

ನಾಡಿನ ಜನರೆಲ್ಲ–ನಾಡಿನ ಬೆಳೆಸಿರಿ ಮೊಳೆಗಳಾದ ಎಳೆಯರು, ಹೆಣ್ಣು ಗಂಡುಗಳು-ನಿರ್ಮಲಚಿತ್ತನ ಪುಣ್ಯಚರಿತ್ರನ ಹರಸುತ್ತ ಎದೆ ತುಂಬಿ ಹಾಡಿದರು. ಅರಸು ವಂಶದ ಮೂಲಿಗರಾದ ಯದುರಾಯರು ಬಂದು ಪ್ರಾರ್ಥಿಸಿದರು. ಆಗ ದೇವಿ ಮುತ್ತೈದೆಯಾಗಿ ಬಂದು ಯದುವಂಶದ ಯಶೋಕೀರ್ತಿಯನ್ನು ಹಾಡಿ ಹರಸಿದಳು. ಕವಿಗಳ ರಾಜಭಕ್ತಿ ತುಂಬಿ ಹರಿಯಿತು.

'ಬಾನ್‌ಕೊಂಡ ಕೃಷ್ಣನ್'-ಮೇಲಿನದು ರಜತ ಮಹೋತ್ಸವದ ಸಂಭ್ರಮದ ಒಸಗೆ ಗೀತೆಯಾದರೆ, ಇದು ದುಃಖದ ಚರಮಗೀತೆ. ಕವಿಯನ್ನು ಪೊರೆದ ಅಣ್ಮ, ಆವರೊಲವಿನಾಣ್ಮ ಭಕ್ತಕನಕ ಕಲಿಕಾಲಜನಕ ಕರ್ನಾಟಕ ಪ್ರೇಮಸಾಮ್ರಾಜ್ಯ ಪೂಜ್ಯ ಆದರ್ಶಪುರುಷ ನಾಲ್ವಡಿ ಕೃಷ್ಣರಾಜ ಬಾನ್‌ಕೊಂಡ, ಇನ್ನಿಲ್ಲದಾದ. ಸಮಸ್ತ ಪ್ರಜಾಕೋಟಿ ದುಃಖದಲ್ಲಿ ಮುಳಗಿದೆ ಕವಿಯ ಗದ್ಗದ ಕಂಠ ಸಾವಧಾನವಾಗಿ ನುಡಿಯುತ್ತಿದೆ ಕನ್ನಡದ ಕಣ್ಣಮಣಿ, ಕರ್ನಾಟಕ ಜೀವಮಣಿ ಬೆಳಗದಿನ್ನು; ಧರ್ಮವಿಧದಲಿ ನಡೆದು, ರಾಜಪಥವನು ತುಳಿದು ರಾಜರ್ಷಿಯಾದ ಕೃಷ್ಣನನು ಮೃತ್ಯು ಬಂದೆರಗಿತು ; ಭೂಲೋಕದ ಆದರ್ಶರಾಜ, ಕಾವ್ಯರಸ ಭೋಜ ಪೂರ್ಣ, ಪುಣ್ಯಾತ್ಮ ಸಿಂಹಾಸನದ ನಿರ್ಮಲ ಮಹಾತ್ಮ ಒಂದಾದ ಕರ್ನಾಟಕ ದೆದೆಯಾಣ್ಮ ಇನ್ನಿಲ್ಲ. ಅರಮನೆ-ನಾಡುಮನೆಗಳು ಶೋಕಸಾಗರದಲ್ಲಿ ಮುಳುಗಿದವು. 'ಅರಮನೆಯ ಕೊರಲೊಡನೆ ಕೊರಲಾಗಿ ನಾಡು ಬಿಕ್ಕಿತ್ತು, ನಿಟ್ಟುಸಿರ ಬಿಸಿಯಳಲ ಹುಚ್ಚುಹೊಳೆಯುಕ್ಕಿತ್ತು. ಇದಕೊಳ್ವರಾರು ? ತಾಳ್ವರಾರು ? ಕವಿವಾಣಿಯೂ ಕುಂಟುತ್ತದೆ, ಬಿಕ್ಕುತ್ತದೆ. ಆದರೂ ಕಲ್ಲೆದೆ ಮಾಡಿ ಅಮಂಗಳದ ಅಳಿವಿಗಾಗಿ, ಮಂಗಳದ ಉಳಿವಿಗಾಗಿ ಕವಿನುಡಿ ನುಡಿಹೂವ ಚೆಲ್ಲುತ್ತದೆ, ಸಾವಿನಂಚಿನಲ್ಲೂ ಮಂಗಳವನ್ನು ಕಾಣುತ್ತದೆ. ಜನಸಾಗರ ಕೊನೆಯ ದರ್ಶನದ ದುಃಖದುರಿಯಲ್ಲಿ ಮುಳುಗಿದ್ದಾಗ ಎಳೆಯರಸ ಮಗು

ಭಕ್ತಿಯಿನ್ ಕೈಮುಗಿದು ದೇವಲೋಕಕೊಯ್ಯೆ ಕಯ್ಯೆಡೆಯಃ ನೀಡುತ್ತದೆ. ಮಧುವನದಲ್ಲಿ ನಿಂತಾಗ ಕವಿವಾಣಿ ನುಡಿಯುತ್ತದೆ ಬಾಳಸತ್ಸವನಿಂತೆಂದು—

ಇನಿತಾಯ್ತೆ, ಹಿಡಿಮಣ್ಣು, ಹಿಡಿಬೂದಿ, ಆಳಬಾಳು?
ಬಡವನೋ, ಬಲ್ಲಿದನೋ, ದೊರೆಯೊ, ಹುಳುವೊ,
ಇನಿತೆ ಈ ಬಾಳು?'

ಹೌದು, ಇಷ್ಟೆ ಈ ಬಾಳು ಎಂಬ ನಗ್ನಸತ್ಯವನ್ನು ಎಷ್ಟೊಂದು ಸುಂದರವಾಗಿ ಧ್ವನಿಸಿದ್ದಾರೆ! ಇಷ್ಟಾದರೂ ಜೀವನಂತಿಕೆ, ಜೀವನ ಕೊನೆಗೊಂಡಿತೆ? ಮನುಷ್ಯ ಆಶಾಜೀವಿ, ಆಸೆಯೇ ಬದುಕಿನ ಊರುಗೋಲು. ಸಾವಿನಲ್ಲೂ ಬದುಕನ್ನು ಕಂಡವನು, ಕಂಡು ಬಾಳಿದವನು. 'ಹೂವಾದ ಬಾಳುದಿರೆ ಹಣ್ಣಾಗಿ ಬಹುದು ಮತ್ತೆ ಹೂವಹುದು. ಬೂದಿ ಬೂದಿಗೆ ಕೂಡೆ, ಮಣ್ಣು ಮಣ್ಣಾಗೆ ಮೃತನ ಮೃತನಾಗುವನು. ದಿವ್ಯ ಕಳೆಯಿನ್ ಕೂಡಿದಮೃತನಾಗುವನು' ಇದು ತಾನೆ ಮನುಕುಲದ ಬದುಕಿನ ರಹಸ್ಯ! 'ಆನಂದ ಆನಂದ ನಿತ್ಯ ಶುಭಮಂಗಳ' ಏಕೆ? ಕೃಷ್ಣನಿಗೆ ಅಳಿವಿಲ್ಲ, ಅವನನ್ನು ಮರೆಯುವಂತಿಲ್ಲ, ಮರೆಯಲೆಂಬಲ್ಲ. ಕಾರಣ, 'ಕೃಷ್ಣ ನಾಡಿದ ನುಡಿಯುದೊಂದೊಂದು–ಆಳುವ ನುಡಿಯಲ್ಲಿಂ–ಮೈಸೂರ ಮೈಸಿರಿಯ ಬಳವಿ, ಕರ್ನಾಟದನ್ನೊಟದಳವಿ, ಭಾರತದೊಳೊಕ್ಕೂಟದಾಳ್ಕೆ, ಬಿಡುತೆಯೊಳಗೆಲ್ಲಿಗೆ ಬಾಳ್ಕೆ' ಎಂದು ಕೃಷ್ಣರಾಜರ ಚಿರಂಜೀವಿತ್ವವನ್ನು ಹಾಡಿ, ಜಯಚಾಮರಾಜೇಂದ್ರ ಒಡೆಯರನ್ನು ಹರಸಿ ಗದ್ದುಗೆಯಲ್ಲಿ ಕೂರಿಸುತ್ತಾರೆ. ಮುಂದೆ 'ಶ್ರೀಜಯನ ಬೆಳಕು'ನಲ್ಲಿ ಅವರ ಯಶೋಗೀತೆಯನ್ನು ಹಾಡುತ್ತಾರೆ.

'ಕನ್ನಡ ಹೆಣ್ಣು' ಕವಿಯ ಅಂತರಂಗದ ಒಲವಿನ ಹೆಣ್ಣು. ಅಕ್ಕ ಕನ್ನಡ ತಂಗಿ ಬ್ರಿಟಾನಿಯಾ ಇಬ್ಬರೂ ಒಮ್ಮೆ ಅವಳು ಒಮ್ಮೆ ಇವಳು ನಲಿಸಿ ಕಲಿಸಿ ಮನವೊಲಿಸಿ ಕವಿಯನ್ನು ಕುಣಿಸುತ್ತಾರೆ. ಈ ಹಬ್ಬದ ರುಚಿಯನ್ನು ಸವಿದ ಕವಿ ಈ ಇನಿಯರಿಬ್ಬರನ್ನೂ ತೂಗಿ ಇವಳ ಸೊಬಗನವಳು ತೊಟ್ಟು ನೋಡಬಯಸು ತ್ತಾರೆ; ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸುತ್ತಾರೆ. ಆಳಿಲು ಸೇವೆ ಮಾಡಿ ಧನ್ಯರಾಗುತ್ತಾರೆ.

'ಕನ್ನಡ ತಾಯನೋಟ' ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷದ ಹಬ್ಬದಲ್ಲಿ ಹಂಪೆಯಲ್ಲಿ ನಡೆದ ಸಮಾರಂಭದಲ್ಲಿ ಉಂಟಾಗಿದ್ದ ಅವ್ಯವಸ್ಥೆ ಗೊಂದಲವನ್ನು ಕಂಡು ಅಲ್ಲಿಯೇ ಅಲ್ಲಿನ ವ್ಯವಸ್ಥಾಪಕರಿಂದ ಎರಡು ಹಾಳೆ ಬಿಳಿಕಾಗದವನ್ನು ಪಡೆದು ಬರೆದ ಕವನ. ಕರ್ನಾಟಕದ ಆ ತುದಿಯಿಂದ ಈ ತುದಿಯವರೆಗೆ ಸಂಚರಿಸಿ ಕನ್ನಡತಿಯ ಹೃದಯವನ್ನು ಕಂಡುಕೊಂಡ, ಆ

ಕನ್ನಡ ತಾಯಿಯ ದರ್ಶನವನ್ನು ಪಡೆದ ಕವಿಗಳು ಆಕೆಯ ಬಯಕೆ-ಹಾರೈಕೆಯನ್ನು ಅಲ್ಲಿ ನೆರೆದಿದ್ದ ಜನಸ್ತೋಮಕ್ಕೆ ನಿವೇದಿಸುತ್ತಾರೆ. ಕರ್ನಾಟಕದ ಭೌಗೋಳಿಕ ಪರಿಸರ, ಪ್ರಕೃತಿಯ ಸಿರಿ-ಸಂಪತ್ತು, ರಾಜ-ಮಹಾರಾಜರ ವೈಭವ ಪರಂಪರೆ, ನಾಡಿನ ಜನರ ಸ್ವಭಾವ, ಅಂದ ಚಂದ ಬದುಕು, ಹರಿವ ನದಿಗಳು, ಕಂಗೊಳಿಸುವ ಬೆಟ್ಟದ ಸಾಲುಗಳು, ಹಸುರು ಚೆಲ್ಲಿರುವ ವನ-ಪರ್ವತಗಳು, ಭೋರ್ಗರೆಯುತ್ತ ಬುರುಗನ್ನು ಚೆಲ್ಲುತ್ತ ಮೊರಡಿಯೆತ್ತರಕ್ಕೆ ಉಬ್ಬಿ ಚಿಮ್ಮಿ ಚಿನ್ನಾಟವಾಡುತ್ತ ಮಲೆಯುತ್ತಿರುವ ಸಾಗರ-ತರಂಗಗಳು, ಜಲದ ಜುಳು ಜುಳು ನಾದದೊಂದಿಗೆ ಮಂಜುಳಗಾನ ಮಾಡುತ್ತ ಹರಿವ ತುಂಗೆ ಕಾವೇರಿಯರು, ದಬದಬನೆ ಧುಮುಕುತ್ತಿರುವ ಜಲಪಾತಗಳು ಮುಂತಾದ ಭವ್ಯ ವೈಭವ ದೃಶ್ಯಗಳನ್ನು ವರ್ಣಿಸುತ್ತಿರುವಂತೆಯೇ ಕನ್ನಡ ತಾಯ ದರ್ಶನ ಮಾಡಿಸುತ್ತಾರೆ. ಎಷೆಹೊತ್ತಿನ ಮಿಂಚಿನ ನೋಟವಾದರೂ ಸವಿನೋಟ ಸನೆಯದೆದೆ ಚಿಮ್ಮುವಾ ನೋಟ. ಆಕೆ 'ಅಮೃತಲೋಕದ ಮಾತೆ,ಅಳಿಯದಳ್, ಬಾನ್ ಬಾಳಪೆರ್ಮೆಗಳ ತಾಯಿ' ಕನ್ನಡ ತಾಯಿ! ಸಾಮಾನ್ಯಳಲ್ಲ! ದೇವ ಸಮಾನೆ, ದೇವಿ ತಾನೆ! ಅವಳೆ ತಾನೆ ತನ್ನ ಮಕ್ಕಳಿಗೆ ಕನ್ನಡದ ಹಾಲನೂಡಿದವಳು! ಹೌದು, ಸಿರಿಯ ತಾಯ್ ಸಿರಿಯ ಮಕ್ಕಳ್! ಇಂಥ ತಾಯನ್ನು ಕಂಡ ದೃಶ್ಯ ಎಂಥದು![1] ತುಂಗಭದ್ರೆಯ ತಡಿಯ ಚೆದರಿರುವ ಮೊರಡಿಗಳ ಕೊರಕಲಿನ ಬಿಸಿಲ ಬೇಗುದಿಯ ಬಿರುಕಿನಲಿ ಮುಳ್ಳೆಡೆಯ ಕಲ್ಲು ಹೂವಿಡಿದರೆಯ ಮೇಲೆ, ಕುಳಿತಿದ್ದಾಳಾ ತಾಯಿ, ಕೈಮೇಲೆ ತಲೆಯೂರಿ, ಅಳಲಿನಾಳದಲಿ! ಆಗ 'ಯಾರವ್ವ ನೀ ತಾಯಿ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ? ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು, ಕಾಂತಿಗುಂದಿಹುದು?' ಎಂಬ ಕವಿ ಪ್ರಶ್ನೆ. ಆಗ ಕಂಬನಿಗಳೂರುತಿಹ ಕಳವಳದ, ಕೂರ್ಮೆ ನಡುಗಿಪ ನುಡಿಯ ಕೇಳಿ-ಕತ್ತೆತ್ತಿ, ಪಳಮೆ ಯಾಳದ ಕಣ್ಣನೆನ್ನ ಕಣ್ಣಲಿ ನಟ್ಟು, ಕಯ್ಯ ಕುಳ್ಳಿರಲು ಸನ್ನೆಗೈದೀಪರಿಯೊಳಾಡಿದಳು-' ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ-ಹಿರಿದಾಗಿ ಬಾಳಿದವಳೊಮ್ಮೆ: ಈಗ ಬಡತನ, ಬಡವೆ, ಬಡವಾದೆ: ಬಡವಾದ ಮಕ್ಕಳನು ನೋಡಿ, ಬತ್ತಿ ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ-ಸಾವಿಲ್ಲ ನನಗೆ! ಸಾವಿಲ್ಲ-ಸಾಯುತಿಹೆ! ಎಂದು ಮುಂತಾಗಿ

---

1 ಇದರ ವಿವರಕ್ಕೆ 'ಶ್ರೀಸಾಹಿತ್ಯ'ದ ವಿಷೀ ಅವರ 'ಬಿಎಂಶ್ರೀ_ಪರಿಚಯ ಕಾಣಿಕೆ' ಅನ್ನು ನೋಡಿ.

ಕನ್ನಡ ತಾಯ ಕೊರಗನ್ನು ಬಯಕೆ–ಹಂಬಲಗಳನ್ನು ಕವಿ ಕರುಣಾಜನಕವಾಗಿ ಚಿತ್ರಿಸುತ್ತಾರೆ. ಕವಿಗಳು ತಾಯಿಗೆ ಭರವಸೆ ನೀಡುತ್ತಾರೆ. ತಾಯೆ ನಿನ್ನ ಮಕ್ಕಳು ಈಗ ಮೊದಲಿನಂತಿಲ್ಲ, ಸೆರೆಯನೊಕ್ಕೊಡೆಗೊಗೆದು, ಬಿಡುಗಡೆಯ ಕೈಕೊಂಡು, ಹಳ ನೆನಪುಗಳ ನೆನೆದು, ಹೊಸ ಕಾಣ್ಕೆಗಳ ಕಂಡು ಸಾಮ್ರಾಜ್ಯಗಳ ಮತ್ತೆ ಕಟ್ಟುತಿಹರು....ತಾಯ್ ಬದುಕಿ, ತಾವ್ ಬದುಕಿ, ಹೆರರ ಬದುಕಿಪರು! ಬಾಳಿಪೆ ನೀ ಬಂದು ನೆಲಸಿಹೊಡೆ, ಹರಸಿಹೊಡೆ-ಬಾ ತಾಯಿ ಹರಸು ಎಂದು ಆಹ್ವಾನಿಸುತ್ತಾರೆ. ತಮ್ಮ ಹೃದಯದ ಹಂಬಲನ್ನು, ಕಂಡ ಕನಸನ್ನು ಚಿತ್ರಿಸುತ್ತಾರೆ. ನಸುನಕ್ಕ ತಾಯಿ ಮತ್ತೆ ಯೌವ್ವನವನ್ನು ಪಡೆದು ಮೈತುಂಬಿಕೊಂಡ ತಾಯಿ ರಥವನ್ನೇರುತ್ತಾಳೆ. ತಾಯಿ ಕನ್ನಡ ರಾಜರಾಜೇಶ್ವರಿಯು ಏರಿದ ರಥವನ್ನು ಎಳೆಯುವಾಗಿನ ಸಂಭ್ರಮ ಅಪ್ರತಿಮ.... ಸಿರಿಗನ್ನಡಂ ಗೆಲ್ಗೆ....ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ ಎಂಬ ಕನ್ನಡತಾಯ ಸೊಲ್ಲು ಬಾನೆತ್ತರದಲ್ಲಿ ಆಕಾಶದ ಬಯಲಲ್ಲಿ ಅನುರಣಿತವಾಗುತ್ತದೆ. ಕವಿಗಳು ತಮ್ಮ ಬದುಕಿನಲ್ಲಿಯೇ ತಮ್ಮ ಹೊಂಗನಸು ನನಸಾದುದನ್ನು ಕಂಡು ಹೃದಯ ಬಂದಂತೆ ಆನಂದತುಂದಿಲರಾಗುತ್ತಾರೆ.

ಇಲ್ಲಿನ 'ಶುಕ್ರಗೀತೆ' ಒಂದು ಉತ್ತಮ ಕವನ. ಮೈಸೂರು ವಿಶ್ವವಿದ್ಯಾನಿಲಯದ ಬೆಳ್ಳಿಹಬ್ಬದ ಸಂದರ್ಭದಲ್ಲಿ ಏರ್ಪಡಿಸಿದ್ದ ಕವಿಸಮ್ಮೇಳನದಲ್ಲಿ ಓದಿದ ಪದ್ಯ 'ಓಂ ಸಹನಾವವತು' ಎಂಬ ಶಾಂತಿಮಂತ್ರದಿಂದ ಆರಂಭವಾಗುತ್ತದೆ. ಸೃಷ್ಟಿಕ್ರಮ, ಆದಿಮಂತ್ರ, ದೇವಾಸುರರ ಉದಯ, ಅಂದಿನಿಂದಲೇ ಉದಯವಾದ ಜ್ಞಾನಯಜ್ಞ ನಡೆದು, ಮನುಷ್ಯನ ಒಳಿತು–ಕೆಡುಕುಗಳ ಹೃದಯವನ್ನು ಕಡೆದು ಅಮೃತವನ್ನು ಪಡೆದು, ವಕ್ರಗಳನ್ನು ಋಜುಗೊಳಿಸಿ ಮನುಕುಲಕ್ಕಿತ್ತ ಸಂದೇಶವನ್ನು :

"ಋತವೊಂದೆ ಗೆಲ್ಲುವುದು, ಅನೃತವಲ್ತು ;
ಅಮೃತಮೆನೆ ವಿದ್ಯೆ ; ಅವಿದ್ಯೆಯಲ್ತು ;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು."

ಎಂದು ಮುಂತಾಗಿ ಹಾಡುತ್ತಾರೆ. ಆಸ್ತಿಕತೆಯ ಜೊತೆಗೆ ಜ್ಞಾನೈಕಪಕ್ಷಪಾತಿಗಳಾಗಿ ಸರಸ್ವತಿಯ ದೇಗುಲವೆನಿಸಿರುವ ವಿಶ್ವವಿದ್ಯಾನಿಲಯಗಳು ನೀಡುವ ಜ್ಞಾನ ಸಲಿಲ ಎಷ್ಟು ತಿಳಿಯಾಗಿರಬೇಕು ಎಂಬುದರತ್ತ ಸಂಕೇತ ಮಾಡಿದ್ದಾರೆ.

"ಬಿ. ಎಂ. ಶ್ರೀ. ಅವರನ್ನು ನಾಸ್ತಿಕರು ಇತ್ಯಾದಿಯಾಗಿ ನುಡಿವವರಿಗೆ ಅವರ ಹೃದಯದ ಆಳದಲ್ಲಿ ಸತ್ಯಕ್ಕೆ, ಧರ್ಮಕ್ಕೆ ಎಷ್ಟು ದೊಡ್ಡ ಶ್ರದ್ಧೆ ಇತ್ತು

ಎಂಬುದನ್ನು ಕಾಣಿಸುವ ಮಾತಿದೆ, ಅಲ್ಲಿ. ಅಲ್ಲಿ ವೇದೋಪನಿಷತ್ತುಗಳ ಸೆಲೆ, ಹೊಳಲು ಕೇಳಿಸುತ್ತದೆ. ಋತದ ಪ್ರಯೋಗ ಸಾರ್ಥಕವಾಗಿ ಬರುತ್ತದೆ.... ಕೇಡಿನ ಸ್ವರೂಪಗಳಾದ ದುಷ್ಟಶಕ್ತಿಗಳು, ತಾಮಸ, ಅಸತ್ತು, ಮೃತ್ಯುಕಾರಕ ಶಕ್ತಿಗಳು ಹೇಗೆ ಲೋಕದಲ್ಲಿ ಪ್ರಭಾವ ಬೀರುತ್ತವೆ ಎಂಬುದನ್ನು ಆ ಗೀತೆಯ ಎರಡನೆಯ ಭಾಗದಲ್ಲಿ ವರ್ಣಿಸುತ್ತಾರೆ. ಅದರಷ್ಟು ತೀಕ್ಷ್ಣವಾಗಿ ದೈತ್ಯಶಕ್ತಿಗಳು ಸಂಶಯಪಾಪ ಬಿತ್ತುತ್ತವೆ: 'ಅಲ್ಲದುದನಹುದೆಂದು, ಅಹುದನಲ್ಲೆಂದು, ಇಲ್ಲದುದನಿಹುದೆಂದು, ಇಹುದನಿಲ್ಲೆಂದು, ನಲ್ಲದಂ ಪೊಲೆಯೆಂದು, ಪೊಲೆ ನಲ್ಲದೆಂದು, ತಿರಿಸಿದರ್ ಮಾಯಾವಿಗಳ್ ಬಾಳ್ವ ಮಕ್ಕಳಂ ಸಾವ ಸಂಸಾರ ಸುತ್ತಿ ಪಲಪೇಸರ್, ಪುರುಳೊಂದು, ಪಲತೆರನ್, ನೆರನೊಂದು—ಎಂದು ಬರೆದು ದೇವ ಅಸುರ ಎಂಬುದು ಆರಂಭವಾಯಿತು. ಇವು ಉತ್ಪನ್ನ ಮಾಡಿರುವ ಕಾಳ ಕೂಟವನ್ನು ತಿಳಿಸಿ, ಮೂರನೆಯ ಭಾಗದಲ್ಲಿ ಕಣ್ಣಿಗೆ ಬೇಕಾಗುವಂತೆ ಹೃದಯಕ್ಕೆ ಧೈರ್ಯ ಬರುವಂತೆ, ಬಾಳನ್ನು ಧರ್ಮಕ್ಕೆ ನಡೆಸುವಂತೆ 'ಯುಗಯುಗದೆ ಧರ್ಮಾಮೃತಂಗರೆವ ಗುರುಗಳ್' ಆಗಿ ಆ ಬ್ರಹ್ಮಪುತ್ರರು ಹುಟ್ಟಿ, ಸಂದೇಶಗಳನ್ನು, ಜೀವನಧ್ಯೇಯಗಳನ್ನು ಸಾರಿದ್ದಾರೆ ಎಂದು ತಿಳಿಸುತ್ತದೆ."[1]

'ಪಂಪನ ಒರತೆ', ಪಂಪನ ಸಾವಿರ ವರ್ಷದ ಸಮಾರಂಭದಲ್ಲಿ ಹಾಡಿದ ಕವಿತೆ. ಪಂಪನ ಕಾವ್ಯದ ಬತ್ತದ ಒರತೆಯನ್ನು ಕೀದಾದ ಪದ್ಯದಲ್ಲಿ, 'ಕವಿಕನ್ನಡಿಯೊಳಡಗಿದಂತೆ', ಹರಿಸಿದ್ದಾರೆ;

'ಓ ಪಂಪ, ಗುರುಪಂಪ, ಏನ್ ನೋನ್ತ ನೋಂಪಿಯೋ,
ಏನ್ ಪಾರ್ತ ಪಾರ್ವೋ,
ಕಡೆದಿಟ್ಟೆ ಕಬ್ಬದೊಳ್ ಸಂಸಾರಸಾರಮನ್,
ಧರ್ಮಮನ್, ಕರ್ಮಮನ್, ಶಿವಪದದ ಮರ್ಮಮನ್,
ಸರ್ವಸ್ವಮನ್ !

ಎಂದು ಪಂಪನ ಸಾರವನ್ನು ಸೆರೆಹಿಡಿದಿದ್ದಾರೆ. ರನ್ನ-ಚಾವುಂಡರಾಯರು ಕಂಡ ಭವ್ಯವಾದ ಕನಸು ದಿವ್ಯ-ಭವ್ಯವಾದ ಗೊಮ್ಮಟನಲ್ಲಿ ಸಾಕಾರವಾಗಿ ನಿಂತಿರುವುದನ್ನು ಕಂಡು ಬೆರಗಾಗಿದ್ದಾರೆ. ಪಂಪ ನೀನು ತುಂಬಿದ ಒರತೆಯೇ ಇನ್ನು ಮುಂದೂ ಹರಿಯುತ್ತಿದೆ ಎಂದು ಭಾವವಶರಾಗಿ ಹಾಡಿದ್ದಾರೆ.

'ಧರ್ಮಯುದ್ಧ'ದಲ್ಲಿ ೩೪, ೩೪ ಮಾತ್ರೆಗಳ ಷಟ್ಪದಿಯನ್ನು ಬಳಸಿ,

---

[1] ಅದೇ.

ಮಾಧವನ ಸ್ತೋತ್ರಮಾಡಿ ಎಲ್ಲರನ್ನೂ ಕಾಪಾಡು ಎಂದು ಮೊರೆಯಿಡುತ

'ಶಿಲಪ್ಪದಿಗಾರಂ–ಮುನ್ನುಡಿ'ಯಲ್ಲಿ ಶ್ರೀಯವರು ತಮಿಳು ಸಾಹಿ ಉತ್ತಮ ಗ್ರಂಥಗಳನ್ನು ಕನ್ನಡಕ್ಕೆ ತಂದುಕೊಡಬೇಕೆಂದು ಮಾ ಅನುವಾದಗಳು ಗೆದ್ದಲು ಪಾಲಾದದ್ದು ನಮ್ಮ ದುರದೃಷ್ಟ. 'ಶಿಲಪ್ಪದಿಗಾ ಕಾವ್ಯಕ್ಕೆ ಬರೆದ ಮುನ್ನುಡಿ ರೂಪದ ಹದಿನೇಳು ಸಾಲುಗಳ ತುಣುಕು.

'ಹಾರೈಕೆ' ಮದರಾಸು ನಗರದಲ್ಲಿ ಸೇರಿದ ಇಪ್ಪತ್ತೊಂಬತ್ತನೇ ಕನ ಸಾಹಿತ್ಯ ಸಮ್ಮೇಳನಕ್ಕೆ ಬರೆದು ಕಳುಹಿಸಿದ ಹಾರೈಕೆ. ಇವೆರಡೂ ತಮಿ ಧಾಟಿಯಲ್ಲಿಯೇ ಬರೆದವು. 'ಹಾರೈಕೆ' ದ್ರಾವಿಡಗಣ–ತ್ರಿಪದಿ–ಕುರುಳು ಧಾ ಯಲ್ಲಿದೆ.

"ಹೀಗೆ ಶ್ರೀಯವರ ಬದುಕಿನೊಂದಿಗೆ ಪಕ್ವವಾಗಿ ಬೆಳೆದ ಮನಸ್ಸಿನ ಹಂಬ ಗಳು, ಹೊಂಗನಸುಗಳು ಈ ಕೃತಿಯಲ್ಲಿ ಪ್ರಕಟವಾಗಿವೆ. ಇವರ ಕಾವ್ಯದ ಕನ್ನಡನಾಡ ಪ್ರೇಮ ಇದೆ, ಭಾರತ ವರ್ಷದ ಪ್ರೇಮ ಇದೆ, ಸಜ್ಜನರಾ ಆಂಗ್ಲರನ್ನು ಕುರಿತು ವಿಶ್ವಾಸವಿದೆ, ವಿಶ್ವವನ್ನು ಒಳಕೊಳ್ಳುವ ವೈಶಾಲ್ಯವಿದೆ ಇವರು ವೇದಕ್ಕೆ ಶರಣುಹೋದರು; ಬೈಬಲನ್ನು ಮೆಚ್ಚಿಕೊಂಡರು; ಖೊರಾ ನನ್ನು, ಜೆಂದ್ ಅವೆಸ್ತವನ್ನು ಒಪ್ಪಿ ಅರಿತರು. ಷೇಕ್ಸ್‌ಪಿಯರನ್ನು, ಕಾರ್ಲೈಲನ್ನು ಗಯಟೆಯನ್ನು ಗುರು ಎಂದರು; ಕಾಳಿದಾಸ, ಪಂಪ, ನಾರಣಪ್ಪ, ಬಸವಣ್ಣರಲ್ಲಿ ತಮ್ಮ ಹಿರಿಯರನ್ನು ಕಂಡರು. ಮಾನವನ ಪಾಲಿಗೆ, ಬಾಹ್ಯಪ್ರಪಂಚಕ್ಕೆ ಒಬ್ಬ ಸೂರ್ಯನಿರುವಂತೆ, ಅಂತರ್ಲೋಕಕ್ಕೆ ಒಂದು ಜ್ಯೋತಿ ಇರುವುದನ್ನು ಅನುಭವಿ ಸಿದರು. ನಮ್ಮ ಕಾಲಕ್ಕೆ ಒಬ್ಬ ಋಷಿಯಂತೆ ಆದರು; ಋಷಿಯಂತೆ ನುಡಿದರು.

....ಮೈಸೂರಾಗಿ ಉಳಿದ ಕನ್ನಡನಾಡೂ ಒಂದು ನಾಡು, ಒಂದು ಬಾಳನ್ನು ಬಾಳಬೇಕು ಎಂಬ ತಮ್ಮ ನಂಬಿಕೆಯನ್ನು ಸಾರಿದರು; ಜನದ ಮನಸ್ಸಿನಲ್ಲಿ ಬಿತ್ತಿದರು. ಕನ್ನಡಿಗರದೊಂದು ಧರ್ಮವಿದೆ, ಅವರ ಗುರುತಾಗಿ ಕನ್ನಡ ಎತ್ತಿ ಹಿಡಿಯುವ ಬಾವುಟವೊಂದಿದೆ ಎಂಬುದನ್ನು ತೋರಿಸಿದರು....ಕನ್ನಡ ಜನತೆಗೆ ಹಿರಿಯನಡೆ ಹಿರಿಯ ಮಾತಿನ ರೀತಿಯನ್ನು ಸೂಚಿಸಿದರು."[1]

---

1 'ಹೊಂಗನಸುಗಳು' ಕವನಸಂಗ್ರಹದಲ್ಲಿ ಶ್ರೀನಿವಾಸರ 'ಆರಾಧನ' ನೋಡಿ.

ಡಾ॥ ಬಿ. ನಂ. ಚಂದ್ರಯ್ಯ

---

ಹೂವಿನಿಂದ ನಾರು ಶಿರೋಧಾರ್ಯವಾಗುವಂತೆ ಗುಣವುಳ್ಳವರ ಸಂಸರ್ಗ ದಿಂದ ಅಲ್ಪನೂ ಗೌರವಾರ್ಹನಾಗುತ್ತಾನೆ. —ಜಗನ್ನಾಥ

No. KRNN. 29 / WPP 6

LICENSE No. 21
LICENSED TO POST WITHOUT PREPAYMENT

